**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಕೃತ ಜ್ಞಾಪನ ದಿನಾಂಕ 15–11–2006ರಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಸುತ್ತೋಲೆ ದಿನಾಂಕ 25–05–2006 ಮತ್ತು 06–07–2006ರಲ್ಲಿ ನೀಡಿರುವ ಮಾರ್ಗದರ್ಶನದ ಹಿನ್ನೆಲೆಯಲ್ಲಿ, ದಿನಾಂಕ 01–01–1986 ಮತ್ತು ಆ ತರುವಾಯ ವಿವಿಧ ದರ್ಜೆಗಳಲ್ಲಿ ಹಂಗಾಮಿಯಾಗಿ ಕಾರ್ಯನಿರ್ವಹಿಸುತ್ತಿರುವ ದಿನಗೂಲಿ ನೌಕರರ ಸೇವೆಯನ್ನು ಸಕ್ರಮಗೊಳಿಸುವ ಬಗ್ಗೆ ಜಿಲ್ಲೆಯಲ್ಲಿನ ನಗರ ಸ್ಥಳೀಯ ಸಂಸ್ಥೆಗಳ 'ಡಿ' ವೃಂದದ ಹುದ್ದೆಗಳಿಗೆ ಸಂಬಂಧಪಟ್ಟಂತೆ ಪರಿಶೀಲಿಸಲು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ಸಮಿತಿ, ರಾಜ್ಯದಲ್ಲಿನ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸುತ್ತಿರುವ 'ಸಿ' ವೃಂದದ ಹುದ್ದೆಗಳಿಗೆ ಸಂಬಂಧಪಟ್ಟಂತೆ ಪೌರಾಡಳಿತ ನಿರ್ದೇಶಕರ ಅಧ್ಯಕ್ಷತೆಯಲ್ಲಿ ರಾಜ್ಯ ಮಟ್ಟದ ಸಮಿತಿಯನ್ನು ರಚಿಸಲಾಗಿತ್ತು.

2) ಮೇಲೆ (2)ರಲ್ಲಿ ಓದಲಾದ ದಿನಾಂಕ 16–01–2007ರ ಅಧಿಸೂಚನೆಯಲ್ಲಿ ಬೆಂಗಳೂರು ನಗರದ ಸುತ್ತಮುತ್ತ ಇರುವ 7 ನಗರಸಭೆಗಳೂ ಮತ್ತು 1 ಪುರಸಭೆ ಹಾಗೂ 110 ಹಳ್ಳಿಗಳನ್ನು ಬೆಂಗಳೂರು ಮಹಾನಗರ ಪಾಲಿಕೆಗೆ ವಿಲೀನಗೊಳಿಸಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯನ್ನಾಗಿ ರಚಿಸಲಾಗಿದೆ.

3) ಮೇಲೆ (3)ರಲ್ಲಿ ಓದಲಾದ ದಿನಾಂಕ 12–01–2007ರ ಸುತ್ತೋಲೆಯಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಸೇರಿದ 7 ನಗರಸಭೆ, 1 ಪುರಸಭೆ ಹಾಗೂ 110 ಹಳ್ಳಿಗಳ ಕಛೇರಿಯಲ್ಲಿ ನಿರ್ವಹಿಸುತ್ತಿದ್ದ ಕೆಲಸ ಕಾರ್ಯಗಳನ್ನು ಮುಂದುವರಿಸಿಕೊಂಡು ಹೋಗುವ ಬಗ್ಗೆ ಕೆಲವು ಸೂಚನೆಗಳನ್ನು ನೀಡಲಾಗಿದೆ ಮತ್ತು ಆಡಳಿತದ ವಿಚಾರವಾಗಿ ನಗರಸಭೆ ಮತ್ತು ಪುರಸಭೆಗಳಲ್ಲಿ ಕೆಲಸ ನಿರ್ವಹಿಸುತ್ತಿದ್ದ ಖಾಯಂ ನೌಕರರುಗಳನ್ನು ಸರ್ಕಾರದ ಮತ್ತು ಪಾಲಿಕೆಯ ಚಾಲ್ತಿಯಲ್ಲಿರುವ ನಿಯಮಗಳ ಪ್ರಕಾರ ಪಾಲಿಕೆಯಲ್ಲಿ ವಿಲೀನಗೊಳಿಸಲಾಗುವುದೆಂದು ತಿಳಿಸಲಾಗಿದೆ.

4) ಮೇಲೆ (1)ರಲ್ಲಿ ಓದಲಾದಂತೆ, ಬೆಂಗಳೂರು ಜಿಲ್ಲೆಗೆ ಸಂಬಂಧಪಟ್ಟಂತೆ ಬೆಂಗಳೂರು ನಗರ ಜಿಲ್ಲಾಧಿಕಾರಿಗಳು 'ಡಿ' ವೃಂದದ ದಿನಗೂಲಿ ನೌಕರರಿಗೆ ಸಂಬಂಧಿಸಿದಂತೆ ಮೇಲೆ (4)ರಿಂದ (10) ರವರೆಗೆ ಓದಲಾದ ಆದೇಶಗಳಲ್ಲಿ ರಾಜರಾಜೇಶ್ವರಿ ನಗರಸಭೆ ಮತ್ತು ಕೆಂಗೇರಿ ಪುರಸಭೆಯ 52+6 ಒಟ್ಟು 58, ಮಹದೇವಪುರ ನಗರಸಭೆಯ 55, ಯಲಹಂಕ ನಗರಸಭೆಯ 49, ಬೊಮ್ಮನಹಳ್ಳಿ ನಗರಸಭೆಯ 62, ಬ್ಯಾಟರಾಯನಪುರ ನಗರಸಭೆಯ 45, ದಾಸರಹಳ್ಳಿ ನಗರಸಭೆಯ 25 ಮತ್ತು ರಾಜರಾಜೇಶ್ವರಿ ನಗರಸಭೆಯ ಒಬ್ಬ ಹಂಗಾಮಿ ದಿನಗೂಲಿ ನೌಕರರುಗಳ ಸೇವೆಯನ್ನು ಅವರುಗಳು ದಿನಗೂಲಿಯಾಗಿ 10 ವರ್ಷಗಳ ಸೇವೆಯನ್ನು ಪೂರೈಸಿದ ದಿನಾಂಕದಿಂದ ಜಾರಿಗೆ ಬರುವಂತೆ ಸಕ್ರಮಗೊಳಿಸಿ ಆದೇಶ ಹೊರಡಿಸಿರುತ್ತಾರೆ.

5) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆಯುಕ್ತರು ಮೇಲೆ (11)ರಲ್ಲಿ ಓದಲಾದ ದಿನಾಂಕ 18–12–2007ರ ಪತ್ರದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಸುತ್ತೋಲೆಯಂತೆ ದಿನಾಂಕ 01–10–1986ರ ತರುವಾಯ ಹಂಗಾಮಿ ದಿನಗೂಲಿ ಸೇವೆಗೆ ಸೇರಿದ ನೌಕರರುಗಳನ್ನು ಸಕ್ರಮಗೊಳಿಸಲು ಅವಕಾಶವಿರುವುದಿಲ್ಲ. ಆದರೂ ಸಹ ಜಿಲ್ಲಾಧಿಕಾರಿ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರು ರಾಜರಾಜೇಶ್ವರಿ ನಗರಸಭೆ ಮತ್ತು ಕೆಂಗೇರಿ ಪುರಸಭೆಯ 59 ಮಂದಿ, ದಾಸರಹಳ್ಳಿ ನಗರಸಭೆಯ 25 ಮಂದಿ, ಮತ್ತು ಬ್ಯಾಟರಾಯನಪುರ ನಗರಸಭೆಯ 45 ಮಂದಿ ಅಂದರೆ ಒಟ್ಟು 129 ಮಂದಿ ಹಂಗಾಮಿ ದಿನಗೂಲಿ ನೌಕರರುಗಳ ಸೇವೆಯನ್ನು ಸಕ್ರಮಗೊಳಿಸಿ ಪಾಲಿಕೆಯಲ್ಲಿ ಇವರುಗಳ ಸೇವೆಯನ್ನು ವಿಲೀನಗೊಳಿಸಿರುತ್ತಾರೆ. ಜಿಲ್ಲಾಧಿಕಾರಿಯವರ ಆದೇಶವು ಸರ್ಕಾರಿ ಆದೇಶಗಳು ಮತ್ತು ಸರ್ವೋಚ್ಚ ನ್ಯಾಯಾಲಯದ ತೀರ್ಪಿಗೆ ವಿರುದ್ಧವಾಗಿರುತ್ತದೆ. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ನೀರು ಸರಬರಾಜುಗಾರರು, ಪಂಪ್ ಆಪರೇಟರ್, ಸೂಪರ್‌ವೈಸರ್, ವಾಟರ್‌ಮ್ಯಾನ್, ಕನ್ಸರ್‌ವೆನ್ಸಿ ದಫೇದಾರ್ ಹುದ್ದೆಗಳು ಮಂಜೂರಾಗಿರುವುದಿಲ್ಲ. ಈ ನೌಕರರುಗಳು ನಡವಳಿಗಳಂತೆ ಕ್ರಮಬದ್ಧಗೊಂಡಿರುವ ದಿನಾಂಕಕ್ಕೆ ಪಾಲಿಕೆಯ ನೌಕರರಾಗಿರುವುದಿಲ್ಲ. ಪೌರಾಡಳಿತ/ಪುರಸಭೆಯ ನೌಕರರಾಗಿರುತ್ತಾರೆ. ಇವರುಗಳ ಸೇವೆಯು ಕ್ರಮಬದ್ಧಗೊಂಡ ದಿನಾಂಕದಿಂದ ಪಾಲಿಕೆಗೆ ಲಭ್ಯವಾಗಿರುವುದಿಲ್ಲವೆಂದು, ಆದ್ದರಿಂದ, ಪುರಸಭೆ ಮತ್ತು ನಗರಸಭೆಗಳಲ್ಲಿನ ದಿನಗೂಲಿ ನೌಕರರ ಸೇವೆಯನ್ನು ಸಕ್ರಮಗೊಳಿಸಿ ಹೊರಡಿಸಿರುವ ಜಿಲ್ಲಾಧಿಕಾರಿಗಳ ತೀರ್ಮಾನಗಳು ಸರ್ಕಾರದ ಮಾರ್ಗಸೂಚಿಗಳಿಗೆ ವಿರುದ್ಧವಾಗಿದೆ ಎಂದು ಈ ಬಗ್ಗೆ ಸರ್ಕಾರದ ಸೂಕ್ತ ಆದೇಶವನ್ನು ಕೋರಿದ್ದರು.

6) ಈ ವಿಷಯದ ಬಗ್ಗೆ ಮೇಲೆ (12)ರಲ್ಲಿ ಓದಲಾದಂತೆ ದಿನಾಂಕ 04–02–2008ರಂದು ನಗರಾಭಿವೃದ್ಧಿ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಸಭೆ ನಡೆದಿದ್ದು, ಸದರಿ ಸಭೆಯಲ್ಲಿ ದಿನಾಂಕ 01–01–1986ರ ನಂತರ ದಿನಗೂಲಿಯಾಗಿ ಸೇವೆಗೆ ಸೇರಿದ ನೌಕರರನ್ನು ಸಕ್ರಮಗೊಳಿಸುವುದು ಸೂಕ್ತವಲ್ಲವೆಂದು, ಇನ್ನು ಮುಂದೆ ಇಂತಹ ಯಾವುದೇ ದಿನಗೂಲಿ ನೌಕರರನ್ನು ಮುಂದಿನ ಆದೇಶದವರೆಗೆ ಸಕ್ರಮಗೊಳಿಸಬಾರದೆಂದು ಎಲ್ಲಾ ಜಿಲ್ಲಾಧಿಕಾರಿಗಳಿಗೆ ನಿರ್ದೇಶನ ನೀಡಲು ಸೂಚಿಸಿದ್ದು, ಅದರಂತೆ ಎಲ್ಲಾ ಜಿಲ್ಲಾಧಿಕಾರಿಗಳಿಗೆ ಪತ್ರವನ್ನು ಬರೆಯಲಾಗಿರುತ್ತದೆ.

7) ನಂತರ ಮೇಲೆ (13)ರಲ್ಲಿ ಓದಲಾದಂತೆ ನಗರಾಭಿವೃದ್ಧಿ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಬಿ.ಬಿ.ಎಂ.ಪಿ.ಯಲ್ಲಿ ವಿಲೀನವಾಗಿರುವ 7 ನಗರಸಭೆ ಮತ್ತು 1 ಪುರಸಭೆಯ ಪೌರಸೇವಾ ನೌಕರರ ಸೇವೆಯನ್ನು ಬಿ.ಬಿ.ಎಂ.ಪಿ.ಯಲ್ಲಿ ವಿಲೀನಗೊಳಿಸುವ ಬಗ್ಗೆ ದಿನಾಂಕ 31–10–2009ರಂದು ನಡೆದ ಸಭೆಯಲ್ಲಿ ಬೆಂಗಳೂರು ನಗರ ಜಿಲ್ಲಾಧಿಕಾರಿಗಳು 7 ನಗರಸಭೆ ಮತ್ತು 1 ಪುರಸಭೆಯಲ್ಲಿ ಸೇವೆ ಸಲ್ಲಿಸುತ್ತಿದ್ದ ಪೌರಾಡಳಿತ ಸೇವೆಗೆ ಸೇರಿದ ಡಿ–ಗ್ರೂಪ್ ದಿನಗೂಲಿ ನೌಕರರುಗಳ ಸೇವೆಯನ್ನು ಸಕ್ರಮಗೊಳಿಸಿ ಆದೇಶವನ್ನು ಹೊರಡಿಸಿದ್ದು, ಸದರಿ ಆದೇಶವು ಸರ್ಕಾರದ ಮಾರ್ಗಸೂಚಿಗಳಿಗೆ ವಿರುದ್ಧವಾಗಿದೆ ಎಂದು ಬಿ.ಬಿ.ಎಂ.ಪಿ. ಆಯುಕ್ತರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರ ಮೇರೆಗೆ ಇನ್ನು ಮುಂದೆ ಯಾವುದೇ ದಿನಗೂಲಿ ನೌಕರರ ಸೇವೆಯನ್ನು ಸಕ್ರಮಗೊಳಿಸಬಾರದೆಂದು ಸರ್ಕಾರವು ತಡೆಯಾಜ್ಞೆ ನೀಡಿರುವ ವಿಷಯದ ಬಗ್ಗೆಯೂ ಸಹ ಸಭೆಯಲ್ಲಿ ಚರ್ಚಿಸಿ, ಬೆಂಗಳೂರು ನಗರ ಜಿಲ್ಲಾಧಿಕಾರಿಗಳು ಈಗಾಗಲೇ ಸರ್ಕಾರದ ನಿರ್ದೇಶನದಂತೆ ನೌಕರರುಗಳ ಸೇವೆಯನ್ನು ಖಾಯಂಗೊಳಿಸಿದ್ದು, ಅದರಂತೆ ಕೆಲವು ವಲಯಗಳಲ್ಲಿ ನೌಕರರುಗಳು ವೇತನ ಸೌಲಭ್ಯಗಳನ್ನು ಸಹ ಪಡೆದಿರುತ್ತಾರೆ. ಒಮ್ಮೆ ಖಾಯಂಗೊಳಿಸಿ ಹೊರಡಿಸಿರುವ ಆದೇಶವನ್ನು ಪುನ: ಹಿಂದಕ್ಕೆ ಪಡೆಯುವುದು ಸೂಕ್ತವಲ್ಲವಾದರೂ ಪ್ರಸ್ತುತ ಪ್ರಕರಣದಲ್ಲಿ ಮೇಲೆ ತಿಳಿಸಿದಂತೆ ಪೌರಸೇವೆಗೆ ಸೇರಿದ ಗ್ರೂಪ್–ಡಿ ದಿನಗೂಲಿ ನೌಕರರುಗಳ ಸೇವೆಯನ್ನು ಸರ್ಕಾರವು ಹೊರಡಿಸಿರುವ ಮಾರ್ಗಸೂಚಿ/ನಿಯಮಗಳ ಪ್ರಕಾರ ಸಕ್ರಮಗೊಳಿಸಲಾಗಿದೆಯೇ ಎನ್ನುವ ಬಗ್ಗೆ ಜಿಲ್ಲಾಧಿಕಾರಿಗಳಿಂದ ಸ್ಪಷ್ಟೀಕರಣ ಪಡೆಯುವಂತೆ ತೀರ್ಮಾನಿಸಲಾಯಿತು.

8) ಅದರಂತೆ ಮೇಲೆ (14)ರಲ್ಲಿ ಓದಲಾದ ದಿನಾಂಕ 07-11-2009ರ ಪತ್ರದಲ್ಲಿ ಬೆಂಗಳೂರು ನಗರ ಜಿಲ್ಲಾಧಿಕಾರಿಯವರು ದಿನಗೂಲಿ ನೌಕರರ ಸೇವೆಯನ್ನು ಸಕ್ರಮಗೊಳಿಸಿರುವುದು ಸರ್ಕಾರದ ಮಾರ್ಗಸೂಚಿಗೆ ವಿರುದ್ಧವಾಗಿರುತ್ತದೆಂದು ಬಿ.ಬಿ.ಎಂ.ಪಿ. ಆಯುಕ್ತರು ತಿಳಿಸಿದ್ದು, ಈ ಬಗ್ಗೆ ದಿನಗೂಲಿ ನೌಕರರ ಸೇವೆಯನ್ನು ಸರ್ಕಾರವು ಹೊರಡಿಸಿರುವ ಮಾರ್ಗಸೂಚಿ/ನಿಯಮಗಳ ಪ್ರಕಾರ ಸಕ್ರಮಗೊಳಿಸಲಾಗಿದೆಯೇ? ಎಂಬ ಬಗ್ಗೆ ಸ್ಪಷ್ಟೀಕರಣ ನೀಡುವಂತೆ ಬೆಂಗಳೂರು ನಗರ ಜಿಲ್ಲಾಧಿಕಾರಿಯವರನ್ನು ಕೋರಲಾಗಿತ್ತು.

9) ಈ ಬಗ್ಗೆ ಮೇಲೆ (15)ರಲ್ಲಿ ಓದಲಾದ ದಿನಾಂಕ 31-12-2009ರ ಪತ್ರದಲ್ಲಿ ಬೆಂಗಳೂರು ನಗರ ಜಿಲ್ಲಾಧಿಕಾರಿಯವರು ಮೇಲೆ (1)ರಲ್ಲಿ ಓದಲಾದ ದಿನಾಂಕ 15-11-2006ರ ಅಧಿಕೃತ ಜ್ಞಾಪನದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ಸಮಿತಿಯನ್ನು ರಚಿಸಿದ್ದು, ಈ ಸಮಿತಿಯು ಗ್ರೂಪ್-ಸಿ ಹುದ್ದೆಗೆ ಸಂಬಂಧಿಸಿದಂತೆ ನೌಕರರ ಸೇವಾ ಮಾಹಿತಿಯನ್ನು ಪರಿಶೀಲಿಸಿ ಸರ್ಕಾರಕ್ಕೆ ಶಿಫಾರಸ್ಸು ಮಾಡಲು ಮತ್ತು ಗ್ರೂಪ್-ಡಿ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುವ ಹಂಗಾಮಿ ದಿನಗೂಲಿ ನೌಕರರನ್ನು ಸಕ್ರಮಗೊಳಿಸಲು ನಿರ್ದೇಶನ ನೀಡಲಾಗಿದೆ. ಅದರಂತೆ ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 25 ಸೇಸ್ಥಾಅ 2003, ದಿನಾಂಕ 25-05-2009ರಲ್ಲಿನ ಮಾರ್ಗದರ್ಶನದಂತೆ, ಸರ್ಕಾರದ ಪತ್ರ ಸಂಖ್ಯೆ: ನಅಇ 95 ಬಿಎಂಎಸ್ 2005 (ಭಾ-2), ದಿನಾಂಕ 14-03-2007ರ ನಿರ್ದೇಶನದಂತೆ, ಮಾನ್ಯ ಸರ್ವೋಚ್ಚ ನ್ಯಾಯಾಲಯದ ದಿನಾಂಕ 10-04-2006ರ ತೀರ್ಪಿನಲ್ಲಿ ಹೇಳಿರುವ ನಾಲ್ಕು ಷರತ್ತುಗಳನ್ನು ಪೂರೈಸಿರುವ ಹಂಗಾಮಿ ದಿನಗೂಲಿ ನೌಕರರನ್ನು ಸಕ್ರಮಗೊಳಿಸಲಾಗಿದೆ. ಸಕ್ರಮಗೊಳಿಸಿರುವ ಹಂಗಾಮಿ ದಿನಗೂಲಿ ನೌಕರರುಗಳು ಹಿಂದಿನ ಗ್ರಾಮ ಪಂಚಾಯಿತಿಗಳಲ್ಲಿ ವಿವಿಧ ಗ್ರೂಪ್-ಡಿ ಹುದ್ದೆಗಳಲ್ಲಿ ನೇಮಕಗೊಂಡಿದ್ದು, ಈ ಗ್ರಾಮ ಪಂಚಾಯಿತಿಗಳು ಸರ್ಕಾರದ ವಿವಿಧ ಆದೇಶಗಳಲ್ಲಿ ಹೊರಡಿಸಿರುವ ಅಧಿಸೂಚಿತ ಪ್ರದೇಶಗಳಲ್ಲಿ ಮುಂದುವರೆದು ಈ ಅಧಿಸೂಚಿತ ಪ್ರದೇಶಗಳು ಸರ್ಕಾರದ ವಿವಿಧ ಆದೇಶಗಳಲ್ಲಿ ಹೊರಡಿಸಿರುವ ನಗರಸಭೆಗಳಲ್ಲಿ ಮುಂದುವರೆದ ಹಂಗಾಮಿ ದಿನಗೂಲಿ ನೌಕರರುಗಳಾಗಿರುತ್ತಾರೆ. ಈ ನೌಕರರುಗಳನ್ನು ಮಂಜೂರಾದ ಹುದ್ದೆಗಳಲ್ಲಿ ನೇಮಕವಾದವರೆಂದು ಪರಿಗಣಿಸಲಾಗಿದೆ. ಈ ರೀತಿ ಸಕ್ರಮಗೊಳಿಸಿರುವ ಹಂಗಾಮಿ ದಿನಗೂಲಿ ನೌಕರರುಗಳು ನೇಮಕವಾದಂತಹ ಸಮಯದಲ್ಲಿ ಗ್ರೂಪ್-ಡಿ ಹುದ್ದೆಗೆ ಯಾವುದೇ ವಿದ್ಯಾರ್ಹತೆಯನ್ನು ನಿಗಧಿಪಡಿಸಿರುವುದಿಲ್ಲ. 2004ಲ್ಲಿ Karnataka Municipal (Recruitments of Officers & Employees) Rules 2004, ದಿನಾಂಕ 17-01-2004ರಿಂದ ಜಾರಿಗೆ ಬಂದಿದ್ದು, ಗ್ರೂಪ್-ಡಿ ಹುದ್ದೆಗೆ 7ನೇ ತರಗತಿ, ಪೌರಕಾರ್ಮಿಕರ ಹುದ್ದೆಗೆ ಕನ್ನಡ ಭಾಷಾ ಪರಿಜ್ಞಾನವಿರಬೇಕೆಂದು ವಿದ್ಯಾರ್ಹತೆ ನಿಗಧಿಪಡಿಸಿರುತ್ತಾರೆ. ಈ ಹಂಗಾಮಿ ದಿನಗೂಲಿ ನೌಕರರುಗಳು ನೇಮಕವಾದ ಸಂದರ್ಭದಲ್ಲಿ ಯಾವುದೇ ವಿದ್ಯಾರ್ಹತೆಯನ್ನು ನಿಗಧಿಪಡಿಸದೇ ಇದ್ದುದ್ದರಿಂದ ಈ ಹಂಗಾಮಿ ದಿನಗೂಲಿ ನೌಕರರುಗಳು ನೇಮಕಗೊಂಡ ಹುದ್ದೆಯಲ್ಲಿಯೇ ಸಕ್ರಮಗೊಳಿಸಲಾಗಿದೆ. ಈ ನೌಕರರ ಹುದ್ದೆಗಳ ಮಂಜೂರಾದ ಸಂಖ್ಯೆಯ ಮಿತಿಯಲ್ಲಿಯೇ ಹಂಗಾಮಿ ನೌಕರರನ್ನು ಖಾಯಂಗೊಳಿಸಿದೆ. ಇವರುಗಳು ನೇಮಕಗೊಂಡ ದಿನಾಂಕದಿಂದ 10 ವರ್ಷಗಳ ಸೇವೆ ಪೂರೈಸಿರುವ ಹಂಗಾಮಿ ದಿನಗೂಲಿ ನೌಕರರುಗಳನ್ನು ಮಾತ್ರ ಸಕ್ರಮಗೊಳಿಸಲಾಗಿದೆ. ಘನ ಸರ್ವೋಚ್ಚ ನ್ಯಾಯಾಲಯದ ದಿನಾಂಕ 10-04-2006ರ ತೀರ್ಪಿನನ್ವಯ 4ನೇ ಷರತ್ತಿನಂತೆ ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 8192/90, ದಿನಾಂಕ 11-04-1990ರ ಆ ತೀರ್ಪಿನಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ 01-07-1984ರ ನಂತರ ನೇಮಕಗೊಂಡ ದಿನಗೂಲಿ ನೌಕರರುಗಳನ್ನು ಮಾನ್ಯ ಉಚ್ಚ ನ್ಯಾಯಾಲಯದ ಆದೇಶಕ್ಕೆ ಒಳಪಟ್ಟು ಮುಂದುವರೆಸಿರುವುದರಿಂದ ಈ ಷರತ್ತನ್ನು ಪೂರೈಸಿದಂತಾಗಿರುವುದಿಲ್ಲವೆಂದು ಬಿ.ಬಿ.ಎಂ.ಪಿ. ಅಯುಕ್ತರು ತಿಳಿಸಿರುತ್ತಾರೆ. ಆದರೆ, ದಿನಾಂಕ 01-01-1986ರ ತರುವಾಯ ಹಂಗಾಮಿ ದಿನಗೂಲಿ ನೌಕರರಾಗಿ ನೇಮಕಗೊಂಡಿದ್ದ ನೌಕರರನ್ನು ಮಾನ್ಯ ಸರ್ವೋಚ್ಚ ನ್ಯಾಯಾಲಯದ ದಿನಾಂಕ 10-04-2006ರ ತೀರ್ಪಿನನ್ವಯ ಸಕ್ರಮಗೊಳಿಸಿರುವ ಹಂಗಾಮಿ ದಿನಗೂಲಿ ನೌಕರರುಗಳು ಯಾರು ವೈಯಕ್ತಿಕವಾಗಿ ನ್ಯಾಯಾಲಯದ ಆದೇಶದಂತೆ ಮುಂದುವರೆದಿರುವುದಿಲ್ಲ ಹಾಗೂ ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪಿನಂತೆ ಸದರಿ ಹಂಗಾಮಿ ದಿನಗೂಲಿ ನೌಕರರುಗಳನ್ನು ಸಕ್ರಮಗೊಳಿಸಿ ಆದೇಶ ಹೊರಡಿಸಿರುವುದು ಕ್ರಮಬದ್ಧವಾಗಿರುತ್ತದೆ ಎಂದು ಜಿಲ್ಲಾಧಿಕಾರಿಯವರು ತಿಳಿಸಿರುತ್ತಾರೆ.

10) ಮೇಲೆ (16)ರಲ್ಲಿ ಓದಲಾದ ದಿನಾಂಕ 06-04-2010ರ ಸರ್ಕಾರದ ಪತ್ರದಲ್ಲಿ ಬೆಂಗಳೂರು ಜಿಲ್ಲಾಧಿಕಾರಿಗಳು ಮೇಲ್ಕಂಡ ನೌಕರರುಗಳ ಸೇವೆಯನ್ನು ಸಕ್ರಮಗೊಳಿಸಿ ಆದೇಶ ಹೊರಡಿಸಿರುವುದು ಕ್ರಮಬದ್ಧವಾಗಿರುತ್ತದೆಂದು ನೀಡಿರುವ ವರದಿಯನ್ನು ಸರ್ಕಾರವು ಒಪ್ಪಿದ್ದು, ಅದರಂತೆ ಸದರಿ ನೌಕರರ ಸೇವೆಯನ್ನು ಸಕ್ರಮಗೊಳಿಸಲು ಕ್ರಮ ಜರುಗಿಸುವಂತೆ ಬಿ.ಬಿ.ಎಂ.ಪಿ. ಆಯುಕ್ತರಿಗೆ ತಿಳಿಸಲಾಗಿದೆ.

11) ಆದರೆ ಬಿ.ಬಿ.ಎಂ.ಪಿ.ಯ ಅಪರ ಆಯುಕ್ತರು (ಆಡಳಿತ) ಇವರು ಮೇಲೆ (17)ರಲ್ಲಿ ಓದಲಾದ ದಿನಾಂಕ 01-10-2010ರ ಪತ್ರದಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 8523/2007 c/w 1352-53/2010 ಮತ್ತು ರಿಟ್ ಅರ್ಜಿ ಸಂಖ್ಯೆ: 12244-46/2010ರಲ್ಲಿ ದಿನಾಂಕ 17-08-2010ರಂದು ನೀಡಿರುವ ಆದೇಶದಂತೆ 7 ನಗರಸಭೆ, 1 ಪುರಸಭೆ ಮತ್ತು ಗ್ರಾಮ ಪಂಚಾಯಿತಿ ನೌಕರರುಗಳನ್ನು ವಿಲೀನಗೊಳಿಸುವ ಸಂಬಂಧ ನಡವಳಿಯನ್ನು 6 ತಿಂಗಳೊಳಗಾಗಿ ಪ್ರಚುರ ಪಡಿಸಲು ಸರ್ಕಾರಕ್ಕೆ ನಿರ್ದೇಶನ ನೀಡಿರುತ್ತದೆ. ಆದ್ದರಿಂದ ಬೆಂಗಳೂರು ನಗರ ಜಿಲ್ಲಾಧಿಕಾರಿಗಳು ಸಕ್ರಮಗೊಳಿಸಿರುವ ನೌಕರರುಗಳು 7 ನಗರಸಭೆ ಮತ್ತು 1 ಪುರಸಭೆಯ ನೌಕರರುಗಳಾಗಿರುವುದರಿಂದ ಸರ್ಕಾರದ ಹಂತದಲ್ಲಿ ಕ್ರಮ ಕೈಗೊಳ್ಳುವಂತೆ ಮಹಾದೇವಪುರ ವಲಯದ ದಿನಗೂಲಿ ನೌಕರರು ಸಲ್ಲಿಸಿರುವ ಮನವಿಯನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ.

12) ಈ ಬಗ್ಗೆ ಮೇಲೆ (18)ರಲ್ಲಿ ಓದಲಾದ ದಿನಾಂಕ 10-11-2010ರ ಸರ್ಕಾರದ ಪತ್ರದಲ್ಲಿ ದಿನಗೂಲಿ ನೌಕರರುಗಳನ್ನು ಪಾಲಿಕೆಯ ಸೇವೆಯಲ್ಲಿ ವಿಲೀನಗೊಳಿಸುವ ಮೊದಲಿಗೆ ಸರ್ಕಾರದ ದಿನಾಂಕ 06-04-2010ರ ಪತ್ರದಲ್ಲಿ ತಿಳಿಸಿರುವಂತೆ ಕ್ರಮ ತೆಗೆದುಕೊಳ್ಳಬೇಕೆಂದು ಆಯುಕ್ತರಿಗೆ ತಿಳಿಸಲಾಗಿತ್ತು. ಆದರೆ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಅಪರ ಆಯುಕ್ತರು (ಆಡಳಿತ) ರವರು ಮೇಲೆ (19)ರಲ್ಲಿ ಓದಲಾದ ದಿನಾಂಕ 16-12-2010ರ ಪತ್ರದಲ್ಲಿ ಬೆಂಗಳೂರು ನಗರ ಜಿಲ್ಲಾಧಿಕಾರಿಯವರು ಪಾಲಿಕೆಯಲ್ಲಿ ವಿಲೀನವಾಗಿರುವ 7 ನಗರಸಭೆ, 1 ಪುರಸಭೆಯಲ್ಲಿ ದಿನಾಂಕ 01-01-1986ರ ತರುವಾಯ ದಿನಗೂಲಿಯಾಗಿ ನೇಮಕಗೊಂಡು 10 ವರ್ಷ ಸೇವೆಯನ್ನು ಪೂರೈಸಿದ ದಿನಾಂಕದಿಂದ ಸಕ್ರಮಗೊಳಿಸಲಾಗಿರುವ ಜಿಲ್ಲಾಧಿಕಾರಿಗಳ 7 ನಡವಳಿಗಳ ಆದೇಶಗಳನ್ನು ಪಾಲಿಕೆಯಲ್ಲಿ ಅನುಷ್ಠಾನಗೊಳಿಸುವ ಸಂಬಂಧ, ರಿಟ್ ಅರ್ಜಿ ಸಂಖ್ಯೆ: 8523/2007, 1352-53/2010 ಮತ್ತು 12244-46/2010ರಲ್ಲಿ ದಿನಾಂಕ 17-08-2010ರಂದು ಮಾನ್ಯ ಉಚ್ಚ ನ್ಯಾಯಾಲಯವು ನೀಡಿರುವ ಆದೇಶದಂತೆ ಸರ್ಕಾರದ ಹಂತದಲ್ಲಿ ನಡವಳಿಯನ್ನು ತಯಾರಿಸಿ ಪ್ರಚುರಪಡಿಸಲು ಪುನ: ಕೋರಿರುತ್ತಾರೆ.

13) ಮಾನ್ಯ ಉಚ್ಚ ನ್ಯಾಯಾಲಯವು ಮೇಲೆ (20)ರಲ್ಲಿ ಓದಲಾದಂತೆ ರಿಟ್ ಅರ್ಜಿ ಸಂಖ್ಯೆ: 8523/2007 c/w 1352-53/2010 ಮತ್ತು ರಿಟ್ ಅರ್ಜಿ ಸಂಖ್ಯೆ: 12244-46/2010ರಲ್ಲಿ ದಿನಾಂಕ 17-08-2010ರಂದು ನೀಡಿರುವ ಆದೇಶದಲ್ಲಿ ದಿನಾಂಕ 08-09-2008, 30-01-2009 ಮತ್ತು

31–10–2009ರ ನಗರಾಭಿವೃದ್ಧಿ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳನ್ನು ರದ್ದುಪಡಿಸುತ್ತಾ, State of Maharashtra V/s Chandrakanth Anant Kulkarni reported in 1981 (4) SCC 130 and as extracted in S.P.Shivprasad Pipal Vs. Union of India & Others ಪ್ರಕರಣದಲ್ಲಿ ನೀಡಿರುವ ತೀರ್ಪಿನಂತೆ ಪೌರಸೇವಾ ನೌಕರರುಗಳನ್ನು ಪಾಲಿಕೆಯ ಸೇವೆಯಲ್ಲಿ ವಿಲೀನಗೊಳಿಸಲು ಮತ್ತು ಪಾಲಿಕೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಹುದ್ದೆಗಳು ಇಲ್ಲದಿದ್ದಲ್ಲಿ, ಈ ಕೆಳಕಂಡ ಅಂಶಗಳನ್ನು ಕಡ್ಡಾಯವಾಗಿ ಪರಿಗಣಿಸಿ ಪೌರಸೇವಾ ವೃಂದ ಮತ್ತು ಇತರೆ ನಗರ ಸ್ಥಳೀಯ ಸಂಸ್ಥೆಗಳ ನೌಕರರ ವಿಲೀನಾತಿ ಪ್ರಕ್ರಿಯೆಯನ್ನು 6 ತಿಂಗಳೊಳಗೆ ಪೂರ್ಣಗೊಳಿಸುವಂತೆ ನಿರ್ದೇಶನ ನೀಡಿದೆ.

(1) Nature and duties of a post;

(2) Powers exercised by the officers holding a post, the extent of territorial or other charge held or responsibilities discharged;

(3) The minimum qualification, if any, prescribed for recruitment to the post and;

(4) The salary of the post.

14) ಈ ಮಧ್ಯೆ ಮೇಲೆ (21)ರಲ್ಲಿ ಓದಲಾದ ದಿನಾಂಕ 30–01–2008, 22–02–2008, 29–02–2008, 21–10–2008 ಮತ್ತು 25–04–2011ರ ಮನವಿಗಳಲ್ಲಿ 7 ನಗರಸಭೆ ಮತ್ತು 1 ಪುರಸಭೆಯ ನೌಕರರುಗಳು ಸರ್ಕಾರಕ್ಕೆ ಪದೇ ಪದೇ ಮನವಿಗಳನ್ನು ಸಲ್ಲಿಸಿ, ತಾವುಗಳು 10 ವರ್ಷಗಳಿಗಿಂತ ಮೇಲ್ಪಟ್ಟು 20 ವರ್ಷಗಳ ಕಾಲ ಸೇವೆ ಸಲ್ಲಿಸಿದ್ದು, ಬೆಂಗಳೂರು ನಗರ ಜಿಲ್ಲಾಧಿಕಾರಿಗಳು ಹೊರಡಿಸಿರುವ ಆದೇಶಗಳನ್ನು ಮಾನ್ಯ ಮಾಡಿ ತಮಗೆ ಸಿಗಬೇಕಾದ ಎಲ್ಲಾ ಆರ್ಥಿಕ ಸವಲತ್ತುಗಳನ್ನು ಕೊಡಿಸಿಕೊಡುವಂತೆ ಮತ್ತು ಪಾಲಿಕೆಯು ಕೋರಿರುವಂತೆ ತಮ್ಮಗಳ ಸೇವೆಯನ್ನು ಪಾಲಿಕೆಯಲ್ಲಿ ವಿಲೀನಗೊಳಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

15) ಬೆಂಗಳೂರು ನಗರ ಜಿಲ್ಲಾಧಿಕಾರಿಗಳು 7 ನಗರಸಭೆ ಮತ್ತು 1 ಪುರಸಭೆಯ ಹಂಗಾಮಿ ದಿನಗೂಲಿ ನೌಕರರ ಸೇವೆಯನ್ನು ಸಕ್ರಮಗೊಳಿಸಿರುವ ಬಗ್ಗೆ ಮೇಲ್ಕಂಡ ನ್ಯಾಯಾಲಯದ ಆದೇಶವನ್ನು ಅನುಷ್ಠಾನಗೊಳಿಸಲು ಸರ್ಕಾರದ ಹಂತದಲ್ಲಿಯೇ ಆದೇಶವನ್ನು ಹೊರಡಿಸಲು ಪಾಲಿಕೆಯು ಶಿಫಾರಸ್ಸು ಮಾಡಿರುವುದನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ;

**ಸರ್ಕಾರದ ಆದೇಶ ಸಂಖ್ಯೆ: ನಅಇ 729 ಎಂಎನ್‌ವೈ 2007, ಬೆಂಗಳೂರು, ದಿನಾಂಕ 13–05–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ವಿಲೀನವಾಗಿರುವ 7 ನಗರಸಭೆ ಮತ್ತು 1 ಪುರಸಭೆಯಲ್ಲಿ ದಿನಾಂಕ 01–01–1986ರ ತರುವಾಯ ದಿನಗೂಲಿಯಾಗಿ ನೇಮಕಗೊಂಡು 10 ವರ್ಷ ಪೂರೈಸಿದ ದಿನಾಂಕದಿಂದ ಬೆಂಗಳೂರು ನಗರ ಜಿಲ್ಲಾಧಿಕಾರಿಗಳು ದಿನಾಂಕ 21–09–2007, 05–11–2007 (ಮೂರು ಆದೇಶಗಳು) ಮತ್ತು 29–11–2007 (ಮೂರು ಆದೇಶಗಳು) ರಂದು ಕ್ರಮವಾಗಿ ಹೊರಡಿಸಿರುವ ಆದೇಶಗಳಲ್ಲಿ ರಾಜರಾಜೇಶ್ವರಿ ನಗರ ಸಭೆ, ದಾಸರಹಳ್ಳಿ ನಗರ ಸಭೆ, ಮಹದೇವಪುರ ನಗರ ಸಭೆ, ಯಲಹಂಕ ನಗರ ಸಭೆ, ಬೊಮ್ಮನಹಳ್ಳಿ ನಗರ ಸಭೆ, ಬ್ಯಾಟರಾಯನಪುರ ನಗರ ಸಭೆ ಮತ್ತು ಕೆಂಗೇರಿ ಪುರಸಭೆಯ ಸಕ್ರಮಗೊಳಿಸಲಾದ ಒಟ್ಟು 295 ನೌಕರರುಗಳನ್ನು **(ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ತಿಳಿಸಿರುವಂತೆ ಮತ್ತು ಜಿಲ್ಲಾಧಿಕಾರಿಗಳ ಪಟ್ಟಿಗೆ ಅನುಗುಣವಾಗಿ)** ಈ ಕೆಳಕಂಡ ಷರತ್ತಿಗೊಳಪಟ್ಟು ಕರ್ನಾಟಕ ಮುನ್ಸಿಪಲ್ ಕಾರ್ಪೋರೇಷನ್ ಅಧಿನಿಯಮ 1976ರ ಕಲಂ 503ರ ಪ್ರಕಾರ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಸೇವೆಯಲ್ಲಿ ವಿಲೀನಗೊಳಿಸಿ ಆದೇಶಿಸಿದೆ;

(1) ವಿಲೀನಗೊಳಿಸಲಾದ ನೌಕರರುಗಳನ್ನು ಅವರು ಹೊಂದಿರುವ ಹುದ್ದೆಗೆ ನೇಮಿಸುವುದು. ಒಂದು ವೇಳೆ ಬಿ.ಬಿ.ಎಂ.ಪಿ. ಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಹುದ್ದೆಗಳು ಲಭ್ಯವಿಲ್ಲದಿದ್ದಲ್ಲಿ, ಅಂತಹವರನ್ನು ತತ್ಸಮಾನ ಹುದ್ದೆಗೆ ನೇಮಿಸುವುದು;

(2) ವಿಲೀನಗೊಳಿಸುವ ಪ್ರಕ್ರಿಯೆಯನ್ನು ಮಾನ್ಯ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ.8523/2007 ಮತ್ತಿತರೆ ಪ್ರಕರಣಗಳಲ್ಲಿ ನೀಡಿರುವ ಆದೇಶದಂತೆ (1) ಹುದ್ದೆಯ ಸ್ವರೂಪ ಮತ್ತು ಕರ್ತವ್ಯಗಳು, (2) ಹುದ್ದೆಯನ್ನು ಹೊಂದಿರುವ ನೌಕರರು ಚಲಾಯಿಸುವ ಅಧಿಕಾರಗಳು, ಅವರ ಅಧಿಕಾರ ವ್ಯಾಪ್ತಿಯ ಪ್ರದೇಶ ಅಥವಾ ಹೊಂದಿರುವ ಇತರೆ ಪ್ರಭಾರ ಅಥವಾ ನಿರ್ವಹಿಸುವ ಜವಾಬ್ದಾರಿಗಳು, (3) ಹುದ್ದೆಯ ನೇಮಕಾತಿಗೆ ನಿರ್ಧಿಷ್ಟಪಡಿಸಲಾದ ಕನಿಷ್ಠ ವಿದ್ಯಾರ್ಹತೆ, ಯಾವುದಾದರೂ ಇದ್ದಲ್ಲಿ, ಹಾಗೂ (4) ಸದರಿ 295 ನೌಕರರಲ್ಲಿ ಯಾರಾದರೂ ನಿಧನರಾಗಿದ್ದಲ್ಲಿ ಅಥವಾ ಸೇವೆಯಿಂದ ಬಿಟ್ಟು ಹೋಗಿದ್ದಲ್ಲಿ ಪರಿಶೀಲಿಸಿ ನಿಯಮಾನುಸಾರ ಕ್ರಮ ಜರುಗಿಸತಕ್ಕದ್ದು; ಈ ಅಂಶಗಳನ್ನು ಕಡ್ಡಾಯವಾಗಿ ಪರಿಗಣಿಸತಕ್ಕದ್ದು;

(3) ಸದರಿ 295 ನೌಕರರ ಆಯಾ ಹುದ್ದೆಯ ವೇತನ ಮತ್ತು ಭತ್ಯೆಗಳನ್ನು ವಿಲೀನಗೊಳಿಸಿದ ದಿನಾಂಕದಿಂದ ಭವಿಷ್ಯವರ್ತಿಯಾಗಿ ನಿಗದಿಪಡಿಸುವುದು ಮತ್ತು ಈ ಸಂಬಂಧದ ವೆಚ್ಚವನ್ನು ಬಿ.ಬಿ.ಎಂ.ಪಿ. ವತಿಯಿಂದಲೇ ಭರಿಸುವುದು; ಮತ್ತು

(4) ವಿಲೀನಗೊಳಿಸಲಾದ ಪ್ರತಿಯೊಬ್ಬ ನೌಕರರ ಹೆಸರು, ಹುಟ್ಟಿದ ದಿನಾಂಕ ಮತ್ತು ಪ್ರಸ್ತುತ ಹುದ್ದೆಗೆ ಸಕ್ರಮಗೊಳಿಸಿರುವ ದಿನಾಂಕವನ್ನು ಮತ್ತೊಮ್ಮೆ ತಾಳೆ ಮಾಡಿ ದೃಢೀಕರಿಸಿಕೊಂಡು ಸೇವಾ ಪುಸ್ತಕಗಳಲ್ಲಿ ದಾಖಲಿಸುವುದು.

(5) ಪಾಲಿಕೆಯ ಸೇವೆಯಲ್ಲಿ ವಿಲೀನಗೊಳಿಸಲು ಇಚ್ಛೆ ವ್ಯಕ್ತಪಡಿಸದ ನೌಕರರುಗಳನ್ನು ಅವರ ಮಾತೃ ಇಲಾಖೆಗೆ ಹಿಂತಿರುಗಿಸುವುದು.

(6) ಈ ಆದೇಶವು ಮುಂದೆ ಸಿ.ಆ.ಸು.ಇಲಾಖೆಯು ದಿನಗೂಲಿ ನೌಕರರ ಬಗ್ಗೆ ಸಚಿವ ಸಂಪುಟದ ಉಪಸಮಿತಿಯು ನೀಡುವ ಶಿಫಾರಸ್ಸನ್ನು ಅನುಸರಿಸಿ ಹೊರಡಿಸಬಹುದಾದ ಆದೇಶದಲ್ಲಿನ ನಿಬಂಧನೆಗಳನ್ವಯ ಪುನರ್ ಪರಿಷ್ಕರಣೆಗೆ ಒಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ರೇಣುಕಾರಾಧ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

**ಸರ್ಕಾರದ ಆದೇಶ ಸಂಖ್ಯೆ: ನಅಇ 729 ಎಂಎನ್‌ವೈ 2007, ದಿನಾಂಕ 13-05-2011ಕ್ಕೆ ಅನುಬಂಧ**

| ಕ್ರ. ಸಂ. | ನೌಕರರ ಹೆಸರು | ಜನ್ಮ ದಿನಾಂಕ |
|---|---|---|
| | **ಮಹದೇವಪುರ ನಗರಸಭೆ** | |
| | **ಜವಾನ – ವೇತನ ಶ್ರೇಣಿ ರೂ. 780-1040** | |
| 1. | 1) ಕೆ.ಆರ್.ರುದ್ರಪ್ಪ | 10-07-1951 |
| 2. | 2) ಬಸವರಾಜು | 09-02-1956 |
| | **ವಿದ್ಯುತ್ ಸಹಾಯಕ – ವೇತನ ಶ್ರೇಣಿ ರೂ.** 4800-**7275** | |
| 3. | 1) ಶಿವಕುಮಾರ್ ಆರಾಧ್ಯ | 01-06-1964 |
| | **ನೀರು ಸರಬರಾಜು ಸಹಾಯಕ – ವೇತನ ಶ್ರೇಣಿ ರೂ.** 2500-3850 | |
| 4. | 1) ಎನ್.ವೈ.ಮುನಿರಾಜು | 14-06-1971 |
| 5. | 2) ಎನ್.ಶಾಂತರಾಜು | 21-05-1976 |
| 6. | 3) ಹೆಚ್.ಜಯರಾಮ್ | 01-06-1958 |
| 7. | 4) ಎಸ್.ಎಂ.ಮುನಿಯಪ್ಪ | 29-07-1973 |
| 8. | 5) ವಿನ್ಸೆಂಟ್ | 08-10-1959 |
| 9. | 6) ಕೆ.ಎಲ್.ರಂಗನಾಥ್ | 01-07-1974 |
| 10. | 7) ಎನ್.ನಾರಾಯಣಪ್ಪ | 07-08-1956 |
| 11. | 8) ಕೆ.ಎಸ್.ಗೋವಿಂದಪ್ಪ | 09-04-1958 |
| 12. | 9) ರಾಮಮೂರ್ತಿ | 01-07-1969 |
| 13. | 10) ಎಂ.ನಾರಾಯಣಸ್ವಾಮಿ | 03-08-1959 |
| 14. | 11) ಎನ್.ಟಿ.ಕೃಷ್ಣಪ್ಪ | 22-06-1957 |
| 15. | 12) ಎ.ಎಂ.ಗಂಗಾಧರ್ | 20-02-1971 |
| 16. | 13) ಎಂ.ರಾಜಪ್ಪ | 05-06-1975 |
| 17. | 14) ಎನ್.ಜಯರಾಮ್ | 25-02-1974 |
| 18. | 15) ಆರ್.ಮಹೇಂದ್ರ | 25-12-1970 |
| 19. | 16) ಶಿವಕುಮಾರ್ | 10-06-1974 |
| 20. | 17) ಎಂ.ರಾಜು | 05-07-1971 |
| 21. | 18) ಅಶ್ವಥ ರೆಡ್ಡಿ | 12-02-1958 |
| 22. | 19) ಎನ್.ಆಂಜನಪ್ಪ | 05-06-1974 |
| 23. | 20) ನಂಜುಂಡಯ್ಯ | 15-01-1970 |
| 24. | 21) ವೆಂಕಟರಮಣಪ್ಪ | 06-01-1964 |
| 25. | 22) ಬಾಬು | 21-07-1969 |
| 26. | 23) ಜಯಮುತ್ತಯ್ಯ | 01-06-1964 |
| | **ಪೌರಕಾರ್ಮಿಕ – ವೇತನ ಶ್ರೇಣಿ ರೂ.2500-3850 ಮತ್ತು 4800-7275** | |
| 27. | 1) ಆರ್.ಮಣಿ | 24-10-1973 |
| 28. | 2) ಗಂಗಪ್ಪ | 20-09-1964 |
| 29. | 3) ಈಶ್ವರ | 22-05-1975 |
| 30. | 4) ಗುಳ್ಳಪ್ಪ | 03-02-1971 |
| 31. | 5) ಚಿಕ್ಕಮುನಿಯಪ್ಪ | 09-06-1968 |
| 32. | 6) ನಾಗರಾಜು | 10-12-1973 |
| 33. | 7) ಸಾಲಮ್ಮ | 04-05-1963 |
| 34. | 8) ಬಿ.ಕೊಂಡಯ್ಯ | 15-04-1960 |
| 35. | 9) ತಿಮ್ಮಯ್ಯ | 10-12-1960 |
| 36. | 10) ಮರಿಯಪ್ಪ | 06-06-1963 |
| 37. | 11) ನರಸಿಂಹಯ್ಯ | 10-12-1960 |
| 38. | 12) ಡಿ.ನಾರಾಯಣಪ್ಪ | 25-05-1960 |
| 39. | 13) ಲಕ್ಷ್ಮಮ್ಮ | 10-04-1958 |

| | | |
|---|---|---|
| 40. | 14) ಸಾವಿತ್ರಮ್ಮ | 19-05-1961 |
| 41. | 15) ಲಕ್ಷ್ಮಿ | 05-03-1972 |
| 42. | 16) ಇಸ್ರೇಲ್ | 07-05-1974 |
| 43. | 17) ದೇವದಾಸ್ | 01-06-1969 |
| 44. | 18) ಎ.ರಾಜು | 06-03-1972 |
| 45. | 19) ಕೆ.ರಾಜು | 04-09-1971 |
| 46. | 20) ರಾಧಮ್ಮ | 20-03-1960 |
| 47. | 21) ಬುಜ್ಜಪ್ಪ | 24-05-1961 |
| 48. | 22) ವಿ.ಕೃಷ್ಣಪ್ಪ | 01-05-1968 |
| 49. | 23) ಸಾಧಮ್ಮ | 10-12-1960 |
| 50. | 24) ಲಕ್ಷ್ಮಮ್ಮ | 20-03-1958 |
| 51. | 25) ಆರ್.ಪ್ರಭುದಾಸ್ | 02-06-1973 |
| 52. | 26) ಲಕ್ಷ್ಮಮ್ಮ | 22-09-1957 |
| 53. | 27) ಬಿ.ಪೆಂಚಲಯ್ಯ | 11-07-1962 |
| 54. | 28) ಎನ್.ಜಿ.ವೆಂಕಟೇಶ್ | 09-04-1961 |
| 55. | 29) ಲಕ್ಷ್ಮಮ್ಮ | 15-05-1976 |

| ಕ್ರ. ಸಂ. | ನೌಕರರ ಹೆಸರು | ಜನ್ಮ ದಿನಾಂಕ |
|---|---|---|
| **ದಾಸರಹಳ್ಳಿ ನಗರಸಭೆ** | | |
| **ಅಟೆಂಡರ್ – ವೇತನ ಶ್ರೇಣಿ ರೂ. 2500–3850** | | |
| 1 | 1) ಕೆಂಚ ಮುನಿಯಪ್ಪ | 01-04-1954 |
| **ನೀರು ಸರಬರಾಜು ಸಹಾಯಕ – ವೇತನ ಶ್ರೇಣಿ ರೂ. 2500–3850** | | |
| 2 | 1) ಸಿದ್ದಗಂಗಯ್ಯ | 26-06-1952 |
| 3 | 2) ಚನ್ನಮುದ್ದಯ್ಯ | 06-05-1958 |
| 4 | 3) ಎನ್.ಎಂ.ಕೃಷ್ಣಮೂರ್ತಿ | 18-08-1966 |
| 5 | 4) ಡಿ.ಎಲ್.ಚಿಕ್ಕಣ್ಣ | 24-05-1955 |
| 6 | 5) ಎನ್.ರಮೇಶ್ | 20-06-1974 |
| 7 | 6) ಎಸ್.ರಾಜಗೋಪಾಲ್ | 12-06-1956 |
| 8 | 7) ಎಂ.ಗಣೇಶ್ | 13-03-1969 |
| 9 | 8) ರಾಮಪ್ಪ | 05-10-1967 |
| 10 | 9) ವೀರಪ್ಪ | 11-02-1952 |
| **ಎಲೆಕ್ಟ್ರಿಕ್ ಸಹಾಯಕ – ವೇತನ ಶ್ರೇಣಿ ರೂ. 2500–3850** | | |
| 11 | 1) ಬಿ.ಆರ್.ಮುನಿರಾಜು | 05-02-1968 |
| 12 | 2) ಎನ್.ಪುಟ್ಟರುದ್ರಯ್ಯ | 10-07-1952 |
| 13 | 3) ಟಿ.ಗೋವಿಂದರಾಜು | 22-07-1975 |
| **ಪೌರಕಾರ್ಮಿಕ – ವೇತನ ಶ್ರೇಣಿ ರೂ. 2500–3850** | | |
| 14 | 1) ಈಶ್ವರ | 25-09-1972 |
| 15 | 2) ನಾಗಣ್ಣ | 19-08-1971 |
| 16 | 3) ಶಿವಮ್ಮ | 11-04-1971 |
| 17 | 4) ಕೆ.ನಾಗರಾಜು | 10-04-1971 |
| 18 | 5) ರಾಮಯ್ಯ | 26-09-1963 |
| 19 | 6) ಗಂಗಮ್ಮ | 10-07-1973 |
| 20 | 7) ರುಕ್ಮಿಣಿ | 28-05-1971 |
| 21 | 8) ವೆಂಕಟರಮಣಮ್ಮ | 10-01-1971 |
| 22 | 9) ಕಾಶೀಪತಿ | 16-03-1955 |
| 23 | 10) ನರಸಪ್ಪ | 06-01-1953 |
| 24 | 11) ನರಸಮ್ಮ | 12-06-1966 |
| 25 | 12) ಲಕ್ಷ್ಮಿ | 20-09-1971 |

| ಕ್ರ. ಸಂ. | ನೌಕರರ ಹೆಸರು | ಜನ್ಮ ದಿನಾಂಕ |
|---|---|---|
| ಬೊಮ್ಮನಹಳ್ಳಿ ನಗರಸಭೆ | | |
| ಪೌರಕಾರ್ಮಿಕ – ವೇತನ ಶ್ರೇಣಿ ರೂ. 2500–3850 | | |
| 1 | 1) ಆಂಜನೇಯ್ಯ | 12–09–1975 |
| 2 | 2) ಕೆ.ರಾಮಕೃಷ್ಣ | 16–02–1974 |
| 3 | 3) ಕೆ.ನಾರಾಯಣ | 08–10–1973 |
| 4 | 4) ಎಂ.ನರಸಿಂಹ | 26–04–1967 |
| 5 | 5) ಮುನಿಕೃಷ್ಣ | 22–10–1963 |
| 6 | 6) ಎಂ.ಮುನಿಯಪ್ಪ | 27–06–1968 |
| 7 | 7) ಪಾಪಣ್ಣ | 10–03–1960 |
| 8 | 8) ಲಗುಮಯ್ಯ | 12–11–1970 |
| 9 | 9) ಶಾಂತಮ್ಮ | 14–01–1971 |
| 10 | 10) ಕಾಕಮ್ಮ | 10–09–1963 |
| 11 | 11) ರತ್ನಮ್ಮ | 04–12–1975 |
| 12 | 12) ಮಲ್ಲಯ್ಯ | 13–04–1966 |
| 13 | 13) ಸಂಪಂಗಮ್ಮ | 18–11–1972 |
| 14 | 14) ಜಯಮ್ಮ | 28–08–1973 |
| 15 | 15) ರಾಜಪ್ಪ ಬಿ.ಎಂ. | 05–02–1965 |
| 16 | 16) ಬಿ.ಲಕ್ಷ್ಮೀದೇವಿ | 02–11–1967 |
| 17 | 17) ಪುಟ್ಟಮ್ಮ | 21–06–1961 |
| 18 | 18) ತಿಮ್ಮಕ್ಕ | 22–10–1968 |
| 19 | 19) ವೈ.ನಾರಾಯಣಪ್ಪ | 10–12–1959 |
| 20 | 20) ಕೆ.ಮುನಿಯಪ್ಪ | 25–11–1967 |
| 21 | 21) ಯಲ್ಲಮ್ಮ | 05–03–1968 |
| 22 | 22) ಅಕ್ಕಯ್ಯಮ್ಮ | 30–05–1968 |
| 23 | 23) ಟಿ.ಗಂಗಯ್ಯ | 07–06–1965 |
| 24 | 24) ಎಂ.ನರಸಿಂಹ | 18–09–1973 |
| 25 | 25) ಪಾಪಯ್ಯ | 27–01–1958 |
| 26 | 26) ಎಸ್.ಮುನಿಯಪ್ಪ | 05–12–1958 |
| 27 | 27) ಎಸ್.ಮುನಿಯಲ್ಲಪ್ಪ | 23–09–1968 |
| 28 | 28) ಎಂ.ಗುಂಡಪ್ಪ | 28–09–1968 |
| 29 | 29) ಪಿ.ವೆಂಕಟೇಶ್ | 20–05–1967 |
| 30 | 30) ಕೃಷ್ಣಪ್ಪ | 15–08–1968 |
| 31 | 31) ತಿಮ್ಮರಾಯಪ್ಪ | 01–09–1967 |
| 32 | 32) ವೈ.ನಂಜಪ್ಪ | 19–06–1963 |
| 33 | 33) ಜಿ.ಮುನಿಯಪ್ಪ | 03–05–1973 |
| 34 | 34) ನಾರಾಯಣಸ್ವಾಮಿ | 03–08–1967 |
| 35 | 35) ವೆಂಕಟೇಶ್ | 09–09–1965 |
| 36 | 36) ರಾಜಪ್ಪ | 11–12–1963 |
| 37 | 37) ದೇಕಪ್ಪ | 20–08–1975 |
| 38 | 38) ಎಂ.ವಸಂತ | 04–04–1968 |
| 39 | 39) ಶಿವ | 08–06–1961 |
| 40 | 40) ರಾಮಯ್ಯ | 27–12–1965 |
| ಜವಾನರು – ವೇತನ ಶ್ರೇಣಿ ರೂ.2500–3850 | | |
| 41 | 1) ಎಂ.ಮುನಿರಾಜ | 04–09–1976 |
| 42 | 2) ಪ್ರೇಮಮ್ಮ | 10–04–1961 |

| | | |
|---|---|---|
| ಎಲೆಕ್ಟ್ರಿಕಲ್ ಸಹಾಯಕ – ವೇತನ ಶ್ರೇಣಿ ರೂ.4800–7275 | | |
| 43 | 1) ವಿ.ಗಂಗುಲಪ್ಪ | 20–04–1969 |
| 44 | 2) ಎಂ.ಸುಧಾಕರ | 05–04–1969 |
| 45 | 3) ಎಂ.ವೆಂಕಟೇಶಪ್ಪ | 22–02–1960 |
| 46 | 4) ಆರ್.ಮುನಿಯಲ್ಲಪ್ಪ | 20–07–1971 |
| 47 | 5) ಬಿ.ಪಿ.ಬಸವರಾಜಯ್ಯ | 14–05–1963 |
| ವಾಲ್ ಮನ್ – ವೇತನ ಶ್ರೇಣಿ ರೂ.4800–7275 | | |
| 48 | 1) ಬಿ.ಎನ್.ಮಾರುತಿ | 09–04–1961 |
| 49 | 2) ಹೆಚ್.ಎಂ.ಮುನಿಯಲ್ಲಪ್ಪ | 20–07–1968 |
| 50 | 3) ಹನುಮಂತಪ್ಪ | 25–06–1961 |
| 51 | 4) ಎ.ಮಂಜುನಾಥ್ | 01–06–1970 |
| 52 | 5) ವಿ.ನಾರಾಯಣ | 16–01–1969 |
| 53 | 6) ಟಿ.ಕೃಷ್ಣಪ್ಪ | 22–02–1963 |
| 54 | 7) ಸೋಮಣ್ಣ | 30–12–1968 |
| 55 | 8) ಕೆ.ಸಿದ್ದರಾಜು | 02–06–1966 |
| 56 | 9) ಎಂ.ಸುರೇಶ್ | 24–03–1974 |
| 57 | 10) ಚಿಕ್ಕಮುನಿಯಪ್ಪ | 29–05–1963 |
| 58 | 11) ಎಂ.ಪುಟ್ಟಸುಬ್ಬಯ್ಯ | 09–05–1959 |
| 59 | 12) ವೆಂಕಟೇಶ್ | 10–06–1968 |
| 60 | 13) ಅಳ್ಳಾಳಪ್ಪ | 15–02–1958 |
| ಅಟೆಂಡರ್ – ವೇತನ ಶ್ರೇಣಿ ರೂ.2500–3850 | | |
| 61 | 1) ಬಿ.ರಾಮಚಂದ್ರ | 15–12–1965 |
| 62 | 2) ವೈ.ಮುನಿರಾಜು | 23–12–1968 |

| ಕ್ರ. ಸಂ. | ನೌಕರರ ಹೆಸರು | ಜನ್ಮ ದಿನಾಂಕ |
|---|---|---|
| ರಾಜರಾಜೇಶ್ವರಿ ನಗರಸಭೆ | | |
| ಎಲೆಕ್ಟ್ರಿಕಲ್ ಸಹಾಯಕ – ವೇತನ ಶ್ರೇಣಿ ರೂ. 2500–3875 | | |
| 1 | 1) ಗೋಪಾಲಕೃಷ್ಣ | 28–08–1969 |

| ಕ್ರ. ಸಂ. | ನೌಕರರ ಹೆಸರು | ಜನ್ಮ ದಿನಾಂಕ |
|---|---|---|
| ಯಲಹಂಕ ನಗರಸಭೆ | | |
| ನೀರು ಸರಬರಾಜು ಸಹಾಯಕರು – ವೇತನ ಶ್ರೇಣಿ ರೂ. 4800–7275 | | |
| 1 | 1) ಮಂಜುನಾಥ್ | 22–06–1969 |
| 2 | 2) ಆಂಜಿನಪ್ಪ | 30–05–1965 |
| 3 | 3) ವೆಂಕಟೇಶ್ | 01–01–1968 |
| 4 | 4) ಎ.ಎಸ್.ರುದ್ರೇಶ್ | 20–07–1961 |
| 5 | 5) ಮುನಿರಾಮಯ್ಯ | 05–09–1960 |
| 6 | 6) ವೈ.ಎನ್.ವಿಶ್ವನಾಥ್ | 05–06–1965 |
| 7 | 7) ಸಿ.ಸುಬ್ರಮಣ್ಯ | 01–07–1970 |
| 8 | 8) ಮುನಿರಾಜು | 20–08–1967 |
| 9 | 9) ಕೆ.ರಾಮರೆಡ್ಡಿ | 06–03–1967 |
| 10 | 10) ಜಿ.ವಿ.ನರಸಿಂಹ | 01–12–1970 |
| 11 | 11) ಪ್ರಕಾಶ್ ಬೆಟ್ಟಹಳ್ಳಿ | 10–09–1964 |
| 12 | 12) ಜಿ.ರಂಗನಾಥಪ್ಪ | 01–06–1959 |
| 13 | 13) ಎಂ.ಎಚ್. ನರಸಿಂಹಮೂರ್ತಿ | 07–06–1964 |
| 14 | 14) ಡೆನ್ನಿಲ್ ಅಲ್ಗೆಡಾ | 08–06–1964 |
| 15 | 15) ಎಂ.ಕೃಷ್ಣ | 21–05–1978 |

| | | |
|---|---|---|
| 16 | 16) ಎಂ.ಮುನಿಸ್ವಾಮಿ | 05–08–1977 |
| 17 | 17) ವೈ.ಜಿ.ಮಂಜುನಾಥ್ | 25–10–1962 |
| 18 | 18) ಕಾಳಪ್ಪ | 13–04–1960 |
| 19 | 19) ವೀರಣ್ಣ | 01–06–1966 |
| 20 | 20) ಬಲರಾಮ | 20–10–1969 |
| 21 | 21) ವೆಂಕಟಲಕ್ಷ್ಮಮ್ಮ | 31–08–1975 |
| **ಪೌರ ಕಾರ್ಮಿಕ – ವೇತನ ಶ್ರೇಣಿ ರೂ. 2500–3850 ಮತ್ತು 4800–7275** | | |
| 22 | 1) ಚೌಡಮ್ಮ | 10–02–1959 |
| 23 | 2) ಜಿ.ಶಂಕರ | 16–02–1970 |
| 24 | 3) ರಮೇಶ್ | 28–06–1969 |
| 25 | 4) ಬಿ.ರಾಮಚಂದ್ರ | 01–06–1962 |
| 26 | 5) ಎಸ್.ವೆಂಕಟೇಶ್ | 10–07–1976 |
| 27 | 6) ನಾರಯಣಪ್ಪ | 25–07–1970 |
| 28 | 7) ನರಸಿಂಹ | 05–04–1972 |
| 29 | 8) ನಾರಾಯಣ | 06–07–1975 |
| 30 | 9) ಎನ್.ವೆಂಕಟೇಶ್ | 16–08–1966 |
| 31 | 10) ಎಂ.ಶ್ರೀನಿವಾಸ್ | 05–04–1975 |
| 32 | 11) ಲಕ್ಷ್ಮಮ್ಮ | 04–06–1974 |
| 33 | 12) ಸಿ.ಬಾಬು | 10–03–1967 |
| 34 | 13) ಬಾಬು | 07–02–1975 |
| 35 | 14) ವೆಂಕಟಪ್ಪ ಕೋಗಿಲು | 31–05–1965 |
| 36 | 15) ಎಂ.ವಿ.ವೆಂಕಟಪ್ಪ | 01–07–1973 |
| 37 | 16) ಎಂ.ನಾಗರಾಜ್ | 10–04–1976 |
| 38 | 17) ಎಂ.ವೆಂಕಟಪ್ಪ | 17–07–1974 |
| 39 | 18) ಎಚ್.ಹನುಮಂತಯ್ಯ | 06–08–1975 |
| 40 | 19) ಕೆ.ನಾರಾಯಣಸ್ವಾಮಿ | 21–05–1970 |
| 41 | 20) ಡಿ.ಮುನಿರತ್ನಮ್ಮ | 15–05–1972 |
| 42 | 21) ಜಿ.ವೇಣುಗೋಪಾಲ್ | 17–07–1974 |
| 43 | 22) ಸಿ.ವಿ.ಮುನಿಯಪ್ಪ | 16–12–1967 |
| 44 | 23) ಯಲ್ಲಮ್ಮ | 17–02–1969 |
| 45 | 24) ಸಿ.ಪ್ರಕಾಶಕುಮಾರ್ | 20–05–1971 |
| 46 | 25) ಆರ್.ಶ್ರೀನಿವಾಸಜಟ್ಟಿ | 13–02–1972 |
| 47 | 26) ವೈ.ಬಾಲಕೇಶವಲು | 22–02–1962 |
| 48 | 27) ಎಚ್.ಎಂ.ರವಿ | 21–07–1963 |
| 49 | 28) ಗಂಗಾಧರ್ | 16–04–1974 |

| ಕ್ರ. ಸಂ. | ನೌಕರರ ಹೆಸರು | ಜನ್ಮ ದಿನಾಂಕ |
|---|---|---|
| ರಾಜರಾಜೇಶ್ವರಿ ನಗರಸಭೆ ಮತ್ತು ಕೆಂಗೇರಿ ಪುರಸಭೆ | | |
| **ವಾಟರ್ ಮ್ಯಾನ್ – ವೇತನ ಶ್ರೇಣಿ ರೂ. 2500–3850** | | |
| 1 | 1) ಎ.ರಾಜಶೇಖರ | |
| 2 | 2) ಎ.ಮೂರ್ತಿ | |
| **ಪಂಪ್ ಆಪರೇಟರ್ – ವೇತನ ಶ್ರೇಣಿ ರೂ. 2500–3850** | | |
| 3 | 1) ಎಸ್.ವರದರಾಜು | |
| **ನೀರು ಸರಬರಾಜುದಾರ – ವೇತನ ಶ್ರೇಣಿ ರೂ. 2500–3850** | | |
| 4 | 1) ಬಿ.ವಿ.ತೇಜಪ್ರಕಾಶ್ | |
| 5 | 2) ನರಸಿಂಹಮೂರ್ತಿ | |
| 6 | 3) ಗುರುಲಿಂಗಯ್ಯ | |

| | | |
|---|---|---|
| 7 | 4) ಚಿಕ್ಕಣ್ಣ | |
| 8 | 5) ಕೆ.ಟಿ.ಚಂದ್ರಪ್ಪ | |
| 9 | 6) ಹೊನ್ನಗಂಗಯ್ಯ | |
| 10 | 7) ನಿಂಗಪ್ಪ | |
| 11 | 8) ನಾರಾಯಣಪ್ಪ | |
| 12 | 9) ಕೆ.ಮುನಿಕೃಷ್ಣ | |
| **ಸೂಪರ್‌ವೈಸರ್ – ವೇತನ ಶ್ರೇಣಿ ರೂ. 2500–3850** | | |
| 13 | 1) ಕೆ.ವಿ.ನಾರಯಣಸ್ವಾಮಿ | |
| 14 | 2) ಕೆ.ನಾರಾಯಣ | |
| **ಪೌರಕಾರ್ಮಿಕ – ವೇತನ ಶ್ರೇಣಿ ರೂ. 2500–3850** | | |
| 15 | 1) ಕಾಶಿಯಮ್ಮ | |
| 16 | 2) ಹನುಮಯ್ಯ | |
| 17 | 3) ವಿ.ರಾಜು | |
| 18 | 4) ರಾಮಾಂಜನೇಯ | |
| 19 | 5) ನಾರಾಯಣಪ್ಪ | |
| 20 | 6) ಶಾಂತಮ್ಮ | |
| 21 | 7) ಹೆಚ್.ನಾರಾಯಣಪ್ಪ | |
| 22 | 8) ಗಂಗಲಕ್ಷ್ಮಮ್ಮ | |
| 23 | 9) ಮಂಜಮ್ಮ | |
| 24 | 10) ಜಯಮ್ಮ | |
| 25 | 11) ಪಿ.ಕೃಷ್ಣಮೂರ್ತಿ | |
| 26 | 12) ಕೆ.ಬೀರಪ್ಪ | |
| 27 | 13) ಜಿ.ಪುಟ್ಟರಾಮ | |
| 28 | 14) ಭಾಗ್ಯಮ್ಮ | |
| 29 | 15) ರಾಮಚಂದ್ರಪ್ಪ | |
| 30 | 16) ಕುಪ್ಪಮ್ಮ | |
| 31 | 17) ವೆಂಕಟಪ್ಪ | |
| 32 | 18) ಮುತ್ತಯ್ಯ | |
| 33 | 19) ಮುತ್ತು ವೆಂಕಟಪ್ಪ | |
| 34 | 20) ಇ.ಶಾಂತಮ್ಮ | |
| 35 | 21) ರಾಧಮ್ಮ | |
| 36 | 22) ಶಕುಂತಲ | |
| 37 | 23) ನಾಗರಾಜ | |
| 38 | 24) ಮರಿಮಲ್ಲಯ್ಯ | |
| 39 | 25) ಹೆಚ್.ಕೆ.ರಾಮಯ್ಯ | |
| 40 | 26) ಜಯಲಕ್ಷ್ಮಮ್ಮ | |
| 41 | 27) ಕೃಷ್ಣಮೂರ್ತಿ | |
| 42 | 28) ನರಸಿಂಹಯ್ಯ | |
| 43 | 29) ಪೂಜಮ್ಮ | |
| 44 | 30) ಟಿ.ಕೆಂಪಯ್ಯ | |
| 45 | 31) ಚೆನ್ನಪ್ಪ | |
| 46 | 32) ಹೆಚ್.ಎಂ.ಗೋಪಾಲ್ | |
| 47 | 33) ರತ್ನಮ್ಮ | |
| 48 | 34) ಕಮಲಮ್ಮ | |
| **ಜವಾನ – ವೇತನ ಶ್ರೇಣಿ ರೂ. 2500–3850** | | |
| 49 | 1) ಜಿ.ಆಂಜನಪ್ಪ | |
| 50 | 2) ವಿ.ಕೃಷ್ಣಪ್ಪ | |

| | | |
|---|---|---|
| **ಎಲೆಕ್ಟ್ರಿಕಲ್ ಸಹಾಯಕ – ವೇತನ ಶ್ರೇಣಿ ರೂ. 2500–3850** | | |
| 51 | 1) ಜಯರಾಮಯ್ಯ | |
| 52 | 2) ಎನ್.ರಾಮಕೃಷ್ಣಯ್ಯ | |
| **ಕೆಂಗೇರಿ ಪುರಸಭೆ** | | |
| **ಪೌರಕಾರ್ಮಿಕ – ವೇತನ ಶ್ರೇಣಿ ರೂ. 2500–3850** | | |
| 53 | 1) ಹೊನ್ನೂರು ಸ್ವಾಮಿ | |
| 54 | 2) ಆದಿಲಕ್ಷ್ಮಿ | |
| 55 | 3) ಮಹಮದ್ ಮೂಸಾ | |
| 56 | 4) ನಾಗರತ್ನ | |
| 57 | 5) ರತ್ನಮ್ಮ | |
| 58 | 6) ಲಿಂಗಮ್ಮ | |

| ಕ್ರ. ಸಂ. | ನೌಕರರ ಹೆಸರು | ಜನ್ಮ ದಿನಾಂಕ |
|---|---|---|
| **ಬ್ಯಾಟರಾಯನಪುರ ನಗರಸಭೆ** | | |
| **ಅಟೆಂಡರ್ – ವೇತನ ಶ್ರೇಣಿ ರೂ. 2500–3850** | | |
| 1 | 1) ಎಲ್.ಜಯಲಕ್ಷ್ಮಿ | 03–04–1965 |
| 2 | 2) ಬಿ.ವಿ.ಗೋಪಾಲರಾಜು | 03–04–1974 |
| 3 | 3) ನಿಸರ್ ಅಹಮದ್ | 05–04–1963 |
| 4 | 4) ಪಿ.ಜಯಕಾಂತ್ | 23–03–1968 |
| 5 | 5) ಆರ್.ಸೋಮಣ್ಣ | 01–05–1970 |
| **ವಾಲ್‌ಮೆನ್ – ವೇತನ ಶ್ರೇಣಿ ರೂ. 2500–3850 ಮತ್ತು 4800–7275** | | |
| 6 | 1) ಟಿ.ಸಿ.ಕೃಷ್ಣಪ್ಪ | 11–04–1957 |
| 7 | 2) ಚನ್ನಕೇಶವ | 12–06–1967 |
| 8 | 3) ಎನ್.ನಾರಾಯಣ | 07–02–1966 |
| 9 | 4) ಗೋವಿಂದರಾಜು | 08–08–1957 |
| 10 | 5) ಧರ್ಮಪಾಲ್ | 25–01–1976 |
| 11 | 6) ಪಿ.ನರಸಿಂಹಲು | 15–08–1969 |
| 12 | 7) ಎ.ನಾಗರಾಜು | 05–03–1969 |
| 13 | 8) ದೊಡ್ಡಮುನಿಯಪ್ಪ | 11–06–1957 |
| 14 | 9) ಓಬಲೇಶ್.ಆರ್ | 10–05–1967 |
| 15 | 10) ಎಂ.ಗೂಳಪ್ಪ | 16–08–1953 |
| 16 | 11) ರಾಮಯ್ಯ | 25–02–1956 |
| 17 | 12) ಮುನಿಯಪ್ಪ | 01–06–1956 |
| 18 | 13) ವರಲಕ್ಷ್ಮಯ್ಯ | 29–07–1963 |
| 19 | 14) ಬಿ.ಎಸ್.ನಾರಾಯಣರಾವ್ | 25–08–1955 |
| 20 | 15) ತ್ಯಾಗರಾಜ್ | 03–12–1962 |
| 21 | 16) ಎ.ನಾಗಪ್ಪ | 03–04–1968 |
| 22 | 17) ಪಿ.ನರಸಿಂಹಯ್ಯ | 01–08–1959 |
| 23 | 18) ಎಂ.ಸಿ.ಶಿವರಾಮೆಗೌಡ | 12–06–1965 |
| 24 | 19) ಹೊನ್ನೂರಪ್ಪ | 20–06–1975 |
| 25 | 20) ಹೆಚ್.ನಾರಾಯಣಸ್ವಾಮಿ | 05–01–1975 |
| 26 | 21) ನಾಗರಾಜ .ಎನ್ | 20–06–1962 |

| | | |
|---|---|---|
| **ಕನ್ಸರ್ವೆನ್ಸಿ ಧಫೇದಾರ್ – ವೇತನ ಶ್ರೇಣಿ ರೂ. 4800–7275** | | |
| 27 | 1) ಆರ್.ಕಾಂತರಾಜ್ | 21–01–1966 |
| **ಪೌರಕಾರ್ಮಿಕ – ವೇತನ ಶ್ರೇಣಿ ರೂ. 2500–3850** | | |
| 28 | 1) ಕೆ.ವೆಂಕಟಮ್ಮ | 19–08–1954 |
| 29 | 2) ರಾಮಯ್ಯ | 06–04–1959 |
| 30 | 3) ಕೃಷ್ಣಮ್ಮ | 19–01–1969 |
| 31 | 4) ಮುನಿಯಮ್ಮ | 10–07–1966 |
| 32 | 5) ರಾಮಚಂದ್ರ | 08–10–1976 |
| 33 | 6) ದೊಡ್ಡ ಕೆಂಪಮ್ಮ | 25–01–1964 |
| 34 | 7) ನರಸಿಂಹಯ್ಯ | 26–09–1976 |
| 35 | 8) ಮುನಿನಂಜಪ್ಪ | 28–06–1976 |
| 36 | 9) ಕೆ.ಮುನಿಯಪ್ಪ | 08–05–1963 |
| 37 | 10) ನಾರಾಯಣಮ್ಮ | 19–01–1962 |
| 38 | 11) ಎಂ.ರಂಗಸ್ವಾಮಿ | 28–09–1964 |
| 39 | 12) ರಾಜಣ್ಣ | 03–04–1961 |
| 40 | 13) ವಜ್ರಪ್ಪ | 08–04–1969 |
| 41 | 14) ರಾಮಕೃಷ್ಣ | 01–10–1966 |
| 42 | 15) ಸಿ.ಮುನಿಯಪ್ಪ | 20–07–1972 |
| 43 | 16) ತಿರುಪಾಲ್.ಎನ್ | 11–04–1974 |
| 44 | 17) ಅನಂತರಾಜು | 20–06–1961 |
| 45 | 18) ಭದ್ರಮ್ಮ | 01–05–1972 |

**ಘೋಷ್ವಾರೆ:**

| ಕ್ರ. ಸಂ. | ನಗರಸಭೆ/ಪುರಸಭೆಯ ಹೆಸರು | ಸಿಬ್ಬಂದಿ ಸಂಖ್ಯೆ |
|---|---|---|
| 1 | **ಮಹದೇವಪುರ ನಗರಸಭೆ** | **55** |
| 2 | **ದಾಸರಹಳ್ಳಿ ನಗರಸಭೆ** | **25** |
| 3 | **ಬೊಮ್ಮನಹಳ್ಳಿ ನಗರಸಭೆ** | **62** |
| 4 | **ರಾಜರಾಜೇಶ್ವರಿ ನಗರಸಭೆ** | **01** |
| 5 | **ಯಲಹಂಕ ನಗರಸಭೆ** | **49** |
| 6 | **ಬ್ಯಾಟರಾಯನಪುರ ನಗರಸಭೆ** | **45** |
| 7 | **ರಾಜರಾಜೇಶ್ವರಿ ನಗರಸಭೆ ಮತ್ತು ಕೆಂಗೇರಿ ಪುರಸಭೆ** | **58** |
| | **ಒಟ್ಟು** | **295** |

**ಎಸ್.ರೇಣುಕಾರಾಧ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಸೋಮವಾರ, ಮೇ ೧೬, ೨೦೧೧ (ವೈಶಾಖ ೨೬, ಶಕ ವರ್ಷ ೧೯೩೩) | ನಂ. ೫೧೧ |
|---|---|---|

## TRANSPORT SECRETARIAT

### NOTIFICATION

**No. SARIE 219 SAESE 2007, Bangalore, Dated: 16 -5 -2011**

The draft of the following rules further to amend the Karnataka General Services (Motor Vehicles Branch) (Recruitment) Rules, 1976, which the Government of Karnataka propose to make in exercise of the powers conferred by sub-section (1) of section 3 read with section 8 of the Karnataka State Civil Services Act, 1978 (Karnataka Act 14 of 1990) is hereby published as required by clause (a) of sub-section (2) of section 3 of the said Act for the information of the persons likely to be affected thereby and notice is hereby given that the said draft will be taken into consideration after thirty days from the date of its publication in the Official Gazette.

Any objection or suggestion, which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Principal Secretary to Government, Transport Department, M.S. Building, Bangalore-560001 .

**Draft Rules**

**1. Title and Commencement**:- These rules may be called the Karnataka General Services (Motor Vehicles Branch) (Recruitment) (Amendment) Rules, 2011.

(2) They shall come into force from the date of their publication in the Official Gazette.

**2. Amendment of Schedule:-** In the schedule to the Karnataka General Services (Motor Vehicles Branch) (Recruitment) Rules, 1976, in the category of post of Motor Vehicles Inspectors, in column 3, the following shall be substituted, namely:-

**"For Direct Recruitment;-**

(1) Must have passed S.S.L.C or possess equivalent qualification.

(2) Must be holder of a Diploma in Automobile Engineering of three years duration or a Diploma in Mechanical Engineering (three years course) awarded by the State Board of Technical Education; and

(3) Must have working experience of not less than one year in a reputed automobile workshop recognized by Government which undertakes repairs of both light and heavy motor vehicles, heavy goods and passengers motor vehicles fitted with petrol and diesel engine.

**Note:** Reputed automobile workshop means a workshop employing not less than 10 persons and registered as per labour laws.

(4) Must be holder of a current driving license to drive motorcycle, heavy goods vehicles and heavy passenger motor vehicles.

(5) Must possess the following minimum physical standards.

**1. For Men**:

(a) Height –165 cms

(b) Chest girth – 86 cms when fully expanded (Minimum expansion must be 5 cms)

**For Women**

(a) Height- 154 cms

(b) Weight- 45 kgs

**2. Vision: (for men and women)**:- Must have the following standard distant and near vision with or without glasses.

| | | Better eye | | Worse eye |
|---|---|---|---|---|
| (i) | Distant Vision | 6/9 | or | 6/9 |
| | | 6/9 | | 6/12 |
| (ii) | Near Vision | 0/6 | | 0/8 |

Each eye must have full field vision. colour blindness, squint or any morbid condition of the eyes or lids of either eye shall be deemed to be a disqualification.

**3. Hearing: (for men and Women)**

(i) Rinner's test

(ii) Webber's test

(iii) Tests for vertigo

Any defect observed during the test mentioned above shall be a disqualification.

**4. Following shall be physical disqualifications (for men and women)**

(i) Knock-knees

(ii) Bow legs

(iii) Flat feet

(iv) Varicose Veins

**5. Free from all congenital diseases and /or deformities**:

**Note:** Certificate of physical fitness shall be certified by the Government Medical Officer not below the rank of an Assistant Surgeon in the Health and Family Welfare Department."

By order and in the name of the Governor of Karnataka,
**M. HARIHARASWAMY**
Desk Officer(I/c)
Transport Department
[080-22032014]

# ವಿಶೇಷ ಪತ್ರಿಕೆ



| ಭಾಗ – I | ಬೆಂಗಳೂರು, ಸೋಮವಾರ, ಮೇ ೧೬, ೨೦೧೧ (ವೈಶಾಖ ೨೬, ಶಕ ವರ್ಷ ೧೯೩೩) | ನಂ. ೫೧೨ |
|---|---|---|



## ಕರ್ನಾಟಕ ಸರ್ಕಾರದ ನಡವಳಿಗಳು

## ಸಹಕಾರ ಸಚಿವಾಲಯ

**ವಿಷಯ:** ರಾಜ್ಯದ ರೈತರಿಗೆ ಪತ್ತಿನ ಸಹಕಾರಿ ಸಂಸ್ಥೆಗಳು ರಿಯಾಯಿತಿ ಬಡ್ಡಿದರದಲ್ಲಿ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಮತ್ತು ಕೃಷಿ ಸಂಬಂಧಿತ ಸಾಲ ನೀಡುವ ಬಗ್ಗೆ.

**ಓದಲಾಗಿದೆ:**

1) ಸರ್ಕಾರಿ ಆದೇಶ ಸಂಖ್ಯೆ: ಸಿಒ 58 ಸಿಎಲ್‌ಎಸ್ 2009, ದಿನಾಂಕ: 06.05.2009.

2) ಸರ್ಕಾರಿ ಆದೇಶ ಸಂಖ್ಯೆ: ಸಿಒ 69 ಸಿಎಲ್‌ಎಸ್ 2010, ದಿನಾಂಕ: 22.04.2010

3) ದಿನಾಂಕ: 24.02.2011 ರಂದು ಮಂಡಿಸಿದ 2011–12ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ 38.

**ಪ್ರಸ್ತಾವನೆ :**

ಮೇಲೆ ಓದಲಾದ (1) ಮತ್ತು (2)ರ ಆದೇಶಗಳಲ್ಲಿ ಪತ್ತಿನ ಸಹಕಾರಿ ಸಂಸ್ಥೆಗಳು ರಾಜ್ಯದ ರೈತರಿಗೆ ಶೇಕಡಾ 3ರ ಬಡ್ಡಿ ದರದಲ್ಲಿ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ / ಕೃಷಿ ಸಂಬಂಧಿತ ಸಾಲಗಳನ್ನು ಒದಗಿಸುವ ಯೋಜನೆಯನ್ನು ಕೆಲವು ಷರತ್ತುಗಳಿಗೊಳಪಟ್ಟು 2009–10 ಹಾಗೂ 2010–11ನೇ ಸಾಲುಗಳಿಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿರುತ್ತದೆ.

ದಿನಾಂಕ:24.02.2011 ರಂದು ಮಂಡಿಸಿದ 2011–12ನೇ ಸಾಲಿನ ಆಯವ್ಯಯದಲ್ಲಿ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ/ ಕೃಷಿ ಸಂಬಂಧಿತ ಸಾಲಗಳನ್ನು ಹಾಗೂ ನೇಕಾರರು ಮತ್ತು ಮೀನುಗಾರರಿಗೆ ಶೇ.3.00ರ ಬಡ್ಡಿ ದರದ ಮೇಲೆ ನೀಡಲಾಗುತ್ತಿರುವ ಸಾಲಗಳ ಯೋಜನೆಗಳನ್ನು ಮುಂದುವರೆಸಲಾಗುವುದೆಂದು ಘೋಷಿಸಲಾಗಿದೆ. ಈ ಬಗ್ಗೆ ರೂಪಿಸಲಾದ ವಿವರವಾದ ಯೋಜನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

### ಸರ್ಕಾರದ ಆದೇಶ ಸಂಖ್ಯೆ: ಸಿಒ 129 ಸಿಎಲ್‌ಎಸ್ 2011, ಬೆಂಗಳೂರು, ದಿನಾಂಕ:11.05.2011

ಮೇಲೆ ವಿವರಿಸಲಾದ ಪರಿಸ್ಥಿತಿಯಲ್ಲಿ 2011–12ನೇ ಸಾಲಿಗೆ ಪತ್ತಿನ ಸಹಕಾರಿ ಸಂಸ್ಥೆಗಳು ರಾಜ್ಯದ ರೈತರಿಗೆ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಮತ್ತು ಕೃಷಿ ಸಂಬಂಧಿತ ಸಾಲಗಳನ್ನು ಶೇ.3.00 ಬಡ್ಡಿ ದರದಲ್ಲಿ ಒದಗಿಸುವ ಯೋಜನೆಯನ್ನು ಮುಂದುವರೆಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರಾತಿ ನೀಡಲಾಗಿದೆ.

1) ಈ ಯೋಜನೆಯು ದಿನಾಂಕ:01.04.2011ರಿಂದ ಗೊತ್ತುಪಡಿಸಿದ ಪತ್ತಿನ ಸಹಕಾರಿ ಸಂಸ್ಥೆಗಳು ರೈತರಿಗೆ ನೀಡುವ ಕೃಷಿ ಮತ್ತು ಕೃಷಿ ಸಂಬಂಧಿತ ಸಾಲಗಳಿಗೆ ಮಾತ್ರ ಅನ್ವಯಿಸುತ್ತದೆ.

2) ಪತ್ತಿನ ಸಹಕಾರಿ ಸಂಸ್ಥೆಗಳು ತನ್ನ ರೈತ ಸದಸ್ಯರಿಗೆ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ/ ಕೃಷಿ ಸಂಬಂಧಿತ ಸಾಲಗಳನ್ನು ಶೇ.3.00 ರ ಬಡ್ಡಿ ದರದ ಯೋಜನೆಯು ರೂ.10.00 ಲಕ್ಷಗಳವರೆಗಿನ ಸಾಲಗಳಿಗೆ ಮಾತ್ರ ಅನ್ವಯವಾಗುತ್ತದೆ. ರೂ.10.00 ಲಕ್ಷಕ್ಕಿಂತ ಮೇಲ್ಪಟ್ಟ ಸಾಲಗಳಿಗೆ ಈ ಸೌಲಭ್ಯವು ದೊರಕುವುದಿಲ್ಲ ಮತ್ತು ರೂ.10.00 ಲಕ್ಷಕ್ಕಿಂತ ಮೇಲ್ಪಟ್ಟ ಸಾಲಗಳಿಗೆ ರೂ.10.00ಲಕ್ಷದವರೆಗೆ ಶೇಕಡಾ 3ರಷ್ಟು ಹಾಗೂ ರೂ.10.00ಲಕ್ಷ ಮೇಲ್ಪಟ್ಟ ಮೊತ್ತಕ್ಕೆ ಪತ್ತಿನ ಸಹಕಾರಿ ಸಂಸ್ಥೆಗಳು ವಿಧಿಸುವ ಸಾಮಾನ್ಯ ಬಡ್ಡಿ ದರವು ಅನ್ವಯವಾಗುತ್ತದೆ.

3) ಈ ಯೋಜನೆಯಡಿ ಪತ್ತಿನ ಸಹಕಾರಿ ಸಂಸ್ಥೆಗಳು ನಬಾರ್ಡ್ ಮಾನದಂಡಗಳ ಪ್ರಕಾರ ಕೃಷಿ, ಕೃಷಿ ಸಂಬಂಧಿತ ಮತ್ತು ಕೃಷಿಯೇತರ ಚಟುವಟಿಕೆಗಳನ್ನು ವರ್ಗೀಕರಿಸತಕ್ಕದ್ದು. ಈ ಸೌಲಭ್ಯವು ಕೃಷಿ ಹಾಗೂ ಕೃಷಿ ಸಂಬಂಧಿತ ಸಾಲಗಳಿಗೆ ಮಾತ್ರ ಅನ್ವಯಿಸುತ್ತದೆ.

4) ಈ ಯೋಜನೆಯು ಪತ್ತಿನ ಸಹಕಾರಿ ಸಂಸ್ಥೆಗಳು ನೀಡುವ ಕೃಷಿಯೇತರ ಸಾಲಗಳಿಗೆ ಅನ್ವಯಿಸುವುದಿಲ್ಲ.

5) ಈ ಯೋಜನೆಯಡಿ ರೈತರಿಗೆ ಪ್ರಾಥಮಿಕ ಹಂತದಲ್ಲಿ ಪತ್ತಿನ ಸಹಕಾರಿ ಸಂಸ್ಥೆಗಳು ಒದಗಿಸುವ ಸಾಲಗಳ ವಸೂಲಾತಿ ಆಧಾರದ ಮೇಲೆ ನಿಗದಿತ ಪ್ರಮಾಣದ ಬಡ್ಡಿ ಸಹಾಯಧನವನ್ನು ಸರ್ಕಾರವು ಸಂಬಂಧಪಟ್ಟ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಿಗೆ, ಪಟ್ಟಣ ಸಹಕಾರ ಬ್ಯಾಂಕುಗಳಿಗೆ, ಜಿಲ್ಲಾ ಕೇಂದ್ರ ಸಹಕಾರ (ಡಿ.ಸಿ.ಸಿ.) ಬ್ಯಾಂಕುಗಳಿಗೆ ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನ ಮೂಲಕ ಹಾಗೂ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಸಹಕಾರಿ ಬ್ಯಾಂಕುಗಳಿಗೆ (ಪಿಕಾರ್ಡ್ ಬ್ಯಾಂಕುಗಳಿಗೆ) ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ (ಕಸ್ಕಾರ್ಡ್) ಬ್ಯಾಂಕಿನ ಮೂಲಕ ಬಿಡುಗಡೆ ಮಾಡಲಾಗುತ್ತದೆ.

6) ಮೂರು ಹಂತಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಕೃಷಿ ಪತ್ತಿನ ಸಹಕಾರ ಸಂಸ್ಥೆಗಳು ಈ ಕೆಳಗೆ ಸೂಚಿಸಿದಂತೆ ಸಾಲ ನೀಡತಕ್ಕದ್ದು.

i) ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು ನೀಡುವ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಿಗೆ ನೀಡುತ್ತಿರುವ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲಗಳ ಮೇಲೆ ಯಾವುದೇ ಬಡ್ಡಿ ದರಗಳನ್ನು ವಿಧಿಸತಕ್ಕದ್ದಲ್ಲ.

ii) ಒಂದು ವೇಳೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ತಮ್ಮ ಸಂಪನ್ಮೂಲಗಳನ್ನು ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲಗಳಲ್ಲಿ ತೊಡಗಿಸಿದಾಗ ಅಂತಹ ಸಾಲಗಳ ಮೇಲೆ ರಾಜ್ಯ ಸರ್ಕಾರದಿಂದ ದೊರೆಯುವ ಬಡ್ಡಿ ಸಹಾಯಧನವನ್ನು ಡಿಸಿಸಿ ಬ್ಯಾಂಕುಗಳು ಆಯಾ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಿಗೆ ಕಡ್ಡಾಯವಾಗಿ ವರ್ಗಾಯಿಸತಕ್ಕದ್ದು.

iii) ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ತಮ್ಮ ಸದಸ್ಯರಿಗೆ ನೀಡುವ ಮಧ್ಯಮಾವಧಿ ಕೃಷಿ/ ಕೃಷಿ ಸಂಬಂಧಿತ ರೂ.10.00 ಲಕ್ಷಗಳವರೆಗಿನ ಸಾಲಗಳಿಗೆ ಶೇ.3.00 ರ ಬಡ್ಡಿದರ ವಿಧಿಸತಕ್ಕದ್ದು. ಸಾಲದ ಪ್ರಮಾಣವು ರೂ.10.00 ಲಕ್ಷಕ್ಕಿಂತ ಹೆಚ್ಚಿದ್ದಲ್ಲಿ ರೂ.10.00 ಲಕ್ಷಕ್ಕಿಂತ ಹೆಚ್ಚಿನ ಮೊತ್ತಕ್ಕೆ ಮಾತ್ರ ಕೃಷಿ ಪತ್ತಿನ ಸಹಕಾರ ಸಂಘಗಳು ವಿಧಿಸುವ ಸಾಮಾನ್ಯ ಬಡ್ಡಿ ದರವು ಅನ್ವಯವಾಗುತ್ತದೆ.

iv) ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ತಾವು ನೀಡುವ ಕೃಷಿ/ ಕೃಷಿ ಸಂಬಂಧಿತ ಸಾಲಗಳ ಮರುಪಾವತಿ ಆಧಾರದ ಮೇಲೆ ರಾಜ್ಯ ಸರ್ಕಾರವು ಗೊತ್ತುಪಡಿಸಿದ ಬಡ್ಡಿ ದರದಲ್ಲಿ ಹಾಗೂ ವಿಧಿಸಿದ ನಿಬಂಧನೆಗಳಿಗೊಳಪಟ್ಟು ಬಡ್ಡಿ ಸಹಾಯಧನದ ಬಿಲ್ಲುಗಳನ್ನು ತ್ರೈಮಾಸಿಕವಾಗಿ ತಯಾರಿಸತಕ್ಕದ್ದು.

v) ತ್ರೈಮಾಸಿಕ ಮುಗಿದ ಒಂದು ತಿಂಗಳೊಳಗಾಗಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಬಡ್ಡಿ ಸಹಾಯಧನದ ಬಿಲ್ಲುಗಳನ್ನು ಸಿದ್ಧಪಡಿಸಿ ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸುವ ಹೊಣೆಯನ್ನು ಡಿಸಿಸಿ ಬ್ಯಾಂಕುಗಳ ವ್ಯವಸ್ಥಾಪಕ ನಿರ್ದೇಶಕರು ಮತ್ತು ಜಿಲ್ಲೆಗಳ ಸಹಕಾರ ಸಂಘಗಳ ಉಪ ನಿಬಂಧಕರು ಇವರುಗಳು ವಹಿಸತಕ್ಕದ್ದು.

vi) ಒಂದು ಪಕ್ಷ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳ ಬದಲಾಗಿ ವಾಣಿಜ್ಯ ಬ್ಯಾಂಕುಗಳಿಂದ ಕೃಷಿ/ ಕೃಷಿ ಸಂಬಂಧಿತ ಸಾಲ ಪಡೆದು ರೈತರಿಗೆ ವಿತರಣೆ ಮಾಡಿದಲ್ಲಿ ಅಥವಾ ವಾಣಿಜ್ಯ ಬ್ಯಾಂಕುಗಳಿಗೆ ಸಂಯೋಜಿಸಲ್ಪಟ್ಟ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ತಮ್ಮ ಸ್ವಂತ ಸಂಪನ್ಮೂಲಗಳಿಂದ ಕೃಷಿ/ ಕೃಷಿ ಸಂಬಂಧಿತ ಸಾಲಗಳನ್ನು ನೀಡಿದಾಗ ಬಡ್ಡಿ ಸಹಾಯಧನದ ಹೊಂದಾಣಿಕೆ ವಿಷಯದಲ್ಲಿ ಮೇಲೆ ಸೂಚಿಸಿದ ನಿಯಮಗಳನ್ನೇ ಪಾಲಿಸತಕ್ಕದ್ದು.

ಆ i) ಕಸ್ಕಾರ್ಡ್ ಬ್ಯಾಂಕು ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳಿಗೆ ತಾನು ನಿಗದಿಪಡಿಸುವ ಯುಕ್ತ ಬಡ್ಡಿ ದರದಲ್ಲಿ ಕೃಷಿ/ ಕೃಷಿ ಸಂಬಂಧಿತ ಸಾಲಗಳನ್ನು ಒದಗಿಸತಕ್ಕದ್ದು. ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳು ಶೇಕಡಾ 3ರ ಬಡ್ಡಿ ದರದಲ್ಲಿ ರೈತರಿಗೆ ರೂ.10.00 ಲಕ್ಷದವರೆಗಿನ ಕೃಷಿ/ ಕೃಷಿ ಸಂಬಂಧಿತ ಸಾಲಗಳನ್ನು ಒದಗಿಸತಕ್ಕದ್ದು. ಸಾಲದ ಪ್ರಮಾಣವು ರೂ.10.00 ಲಕ್ಷಕ್ಕಿಂತ ಹೆಚ್ಚಿದ್ದಲ್ಲಿ ರೂ.10.00 ಲಕ್ಷಕ್ಕಿಂತ ಹೆಚ್ಚಿನ ಮೊತ್ತಕ್ಕೆ ಮಾತ್ರ ಕೃಷಿ ಪತ್ತಿನ ಸಹಕಾರ ಸಂಘಗಳು ವಿಧಿಸುವ ಸಾಮಾನ್ಯ ಬಡ್ಡಿ ದರವು ಅನ್ವಯವಾಗುತ್ತದೆ.

ii) ಪಿಕಾರ್ಡ್ ಬ್ಯಾಂಕುಗಳು ಇಂತಹ ಸಾಲಗಳನ್ನು ತಮ್ಮ ಸ್ವಂತ ಸಂಪನ್ಮೂಲಗಳಿಂದ ಒದಗಿಸಿದಾಗ ಅಷ್ಟರ ಮಟ್ಟಿಗೆ ಕಸ್ಕಾರ್ಡ್ ಬ್ಯಾಂಕು ಸರ್ಕಾರದಿಂದ ಪಡೆಯುವ ಬಡ್ಡಿ ಸಹಾಯಧನವನ್ನು ಪಿಕಾರ್ಡ್ ಬ್ಯಾಂಕುಗಳಿಗೆ ಕಡ್ಡಾಯವಾಗಿ ವರ್ಗಾಯಿಸತಕ್ಕದ್ದು.

ಇ) ಪಟ್ಟಣ ಸಹಕಾರ ಬ್ಯಾಂಕುಗಳು ರೂ.10.00 ಲಕ್ಷದವರೆಗೆ ನೀಡುವ ಮಧ್ಯಮಾವಧಿ ಕೃಷಿ/ ಕೃಷಿ ಸಂಬಂಧಿತ ಸಾಲಗಳಿಗೆ ಶೇ.3.00 ರ ಬಡ್ಡಿ ದರವನ್ನು ವಿಧಿಸತಕ್ಕದ್ದು. ಸಾಲದ ಪ್ರಮಾಣವು ರೂ.10.00 ಲಕ್ಷಕ್ಕಿಂತ ಹೆಚ್ಚಿದ್ದಲ್ಲಿ ರೂ.10.00 ಲಕ್ಷಕ್ಕಿಂತ ಹೆಚ್ಚಿನ ಮೊತ್ತಕ್ಕೆ ಮಾತ್ರ ಪಟ್ಟಣ ಸಹಕಾರ ಬ್ಯಾಂಕುಗಳು ವಿಧಿಸುವ ಸಾಮಾನ್ಯ ಬಡ್ಡಿ ದರವು ಅನ್ವಯವಾಗುತ್ತದೆ.

7) ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕು, ಡಿ.ಸಿ.ಸಿ. ಬ್ಯಾಂಕುಗಳು, ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು, ಕಸ್ಕಾರ್ಡ್ ಬ್ಯಾಂಕು, ಪಿಕಾರ್ಡ್ ಬ್ಯಾಂಕುಗಳು ಹಾಗೂ ಪಟ್ಟಣ ಸಹಕಾರ ಬ್ಯಾಂಕುಗಳು ರೈತರಿಗೆ ಕೃಷಿ/ ಕೃಷಿ ಸಂಬಂಧಿತ ಸಾಲಗಳನ್ನು ಮೇಲೆ ನಿಗದಿಪಡಿಸಿದ ಬಡ್ಡಿ ದರದಲ್ಲಿ ಒದಗಿಸಲು ಅಗತ್ಯವಾದ ಕ್ರಮವನ್ನು ಕೈಗೊಳ್ಳತಕ್ಕದ್ದು.

8) ಅ) ಈ ಯೋಜನೆಯಡಿ ವಿತರಿಸಲಾದ ಕೃಷಿ/ ಕೃಷಿ ಸಂಬಂಧಿತ ಸಾಲಗಳಿಗೆ ಸಂಬಂಧಿಸಿದಂತೆ ಸರ್ಕಾರದ ಬದ್ಧತೆಯು ಸಾಲದ ಅವಧಿಗೆ ಸೀಮಿತವಾಗಿರುತ್ತದೆ. ಆದಾಗ್ಯೂ ರೈತರು ನಿಗದಿತ ದಿನಾಂಕದಂದು ಸಾಲ ಮರುಪಾವತಿಸಲು ವಿಫಲರಾಗಿ ಸುಸ್ತಿದಾರರಾದಲ್ಲಿ, ಸಾಲ ಪಡೆದ ದಿನಾಂಕದಿಂದ ಸರ್ಕಾರದ ಬದ್ಧತೆ ಇರುವುದಿಲ್ಲ ಮತ್ತು ಸುಸ್ತಿಯಾದ ರೈತರು ಸಹಕಾರ ಸಂಘ/ ಸಹಕಾರ ಬ್ಯಾಂಕುಗಳಿಗೆ ಅವುಗಳ ಸಾಮಾನ್ಯ ಬಡ್ಡಿ ದರದಂತೆ ಮತ್ತು ಇತರ ಖರ್ಚುಗಳು ಇದ್ದಲ್ಲಿ ಅದರ ಸಹಿತ ಮರುಪಾವತಿಸಲು ಜವಾಬ್ದಾರರಾಗಿರುತ್ತಾರೆ.

ಆ) ಈ ಸ್ಕೀಮಿನಡಿ ಬಡ್ಡಿ ಸಹಾಯಧನವು ಪೂರ್ಣವಾಗಿ ಮರುಪಾವತಿಯಾಗುವ ಸಾಲಗಳಿಗೆ ಮಾತ್ರ ದೊರೆಯಲಿದೆ ಮತ್ತು ಸಾಲವು ರೈತರಿಗೆ ಬಿಡುಗಡೆಯಾದ ದಿನಾಂಕದಿಂದ ಪ್ರಾರಂಭವಾಗಿ ಸಾಲ ಮರುಪಾವತಿಯ ಗಡುವಿನ ದಿನಾಂಕದವರೆಗೆ ಅಥವಾ ಪೂರ್ಣವಾಗಿ ಸಾಲ ಮರುಪಾವತಿಯಾದ ದಿನಾಂಕ ಇದರಲ್ಲಿ ಯಾವುದು ಮೊದಲೋ ಆ ಅವಧಿಗೆ ಬಡ್ಡಿ ಸಹಾಯಧನವು ಅನ್ವಯಿಸುತ್ತದೆ. ಈ ಸಾಲಗಳು ಸುಸ್ತಿಯಾದಲ್ಲಿ ಸಾಲ ಪಡೆದ ದಿನಾಂಕದಿಂದ ಸರ್ಕಾರದ ಬದ್ಧತೆಯು ಇರುವುದಿಲ್ಲ. ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲಗಳ ಕಂತುಗಳನ್ನು ನಿಗದಿತ ಗಡುವಿನ ಒಳಗೆ ಮರುಪಾವತಿಸಿದಲ್ಲಿ ಮುದ್ದತ್ತು ಮೀರದ ಹೊರಬಾಕಿ (ಚಾಲ್ತಿ ಹೊರಬಾಕಿ) ಮೇಲೆ ಮಾತ್ರ ಬಡ್ಡಿ ಸಹಾಯಧನವು ದೊರೆಯಲಿದೆ.

9) ಪತ್ತಿನ ಸಹಕಾರ ಸಂಘಗಳು/ ಬ್ಯಾಂಕುಗಳು ಬಡ್ಡಿ ಸಹಾಯಧನವನ್ನು ಸಂಬಂಧಿತ ಸಾಲಗಳ ವಸೂಲಾತಿ ಪ್ರಮಾಣವನ್ನು ಆಧರಿಸಿ, ತ್ರೈಮಾಸಿಕ ಕ್ಲೇಮು ಬಿಲ್ಲುಗಳನ್ನು ಸಿದ್ಧಪಡಿಸಿ ಸಮುಚಿತ ಮಾರ್ಗದಲ್ಲಿ ನಿಬಂಧಕರ ಮಂಜೂರಾತಿಗಾಗಿ ಬೇಡಿಕೆ ಸಲ್ಲಿಸತಕ್ಕದ್ದು.

10) ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಡಿ.ಸಿ.ಸಿ. ಬ್ಯಾಂಕುಗಳಿಗೆ ಸಂಯೋಜಿಸಲ್ಪಟ್ಟಿದ್ದಲ್ಲಿ ಡಿ.ಸಿ.ಸಿ. ಬ್ಯಾಂಕುಗಳ ವ್ಯವಸ್ಥಾಪಕ ನಿರ್ದೇಶಕರು ಕ್ಲೇಮು ಬಿಲ್ಲುಗಳನ್ನು ತಯಾರಿಸಿ ಜಿಲ್ಲೆಗೆ ಸಂಬಂಧಪಟ್ಟ ಲೆಕ್ಕಪರಿಶೋಧನಾ ಸಹಾಯಕ/ ಉಪನಿರ್ದೇಶಕರಿಂದ ಪ್ರಮಾಣೀಕರಿಸಿದ ನಂತರ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು ದೃಢೀಕರಿಸಿ ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕಿಗೆ ಸಲ್ಲಿಸತಕ್ಕದ್ದು.

11) ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ವಾಣಿಜ್ಯ/ ಗ್ರಾಮೀಣ ಬ್ಯಾಂಕುಗಳಿಗೆ ಸಂಯೋಜಿಸಲ್ಪಟ್ಟಿದ್ದಲ್ಲಿ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು ಕ್ಲೇಮು ಬಿಲ್ಲುಗಳನ್ನು ತಯಾರಿಸಿ ಜಿಲ್ಲೆಗೆ ಸಂಬಂಧಪಟ್ಟ ಲೆಕ್ಕಪರಿಶೋಧನಾ ಸಹಾಯಕ/ ಉಪನಿರ್ದೇಶಕರಿಂದ ಪ್ರಮಾಣೀಕರಿಸಿದ ನಂತರ ದೃಢೀಕರಿಸಿ ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕಿಗೆ ಸಲ್ಲಿಸತಕ್ಕದ್ದು.

12) ಪಿಕಾರ್ಡ್ ಬ್ಯಾಂಕುಗಳಿಗೆ ಸಂಬಂಧಿಸಿದ ಕ್ಲೇಮು ಬಿಲ್ಲುಗಳನ್ನು ಕಸ್ಕಾರ್ಡ್ ಬ್ಯಾಂಕಿನ ಜಿಲ್ಲಾ ವ್ಯವಸ್ಥಾಪಕರು ತಯಾರಿಸಿ ಪ್ರಮಾಣೀಕರಿಸಿ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು ದೃಢೀಕರಿಸಿ ಕಸ್ಕಾರ್ಡ್ ಬ್ಯಾಂಕಿಗೆ ಸಲ್ಲಿಸತಕ್ಕದ್ದು. ತದನಂತರ ಕಸ್ಕಾರ್ಡ್ ಬ್ಯಾಂಕಿನ ಬ್ಯಾಂಕಿನ ನಿಯಮ 44ರಡಿ ನೇಮಕವಾದ ಲೆಕ್ಕಪರಿಶೋಧನಾ ಉಪ/ಜಂಟಿ ನಿರ್ದೇಶಕರು ಪ್ರಮಾಣೀಕರಿಸಿದ ನಂತರ ಕಸ್ಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಪ್ರಮಾಣೀಕರಿಸಿ ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸತಕ್ಕದ್ದು.

13) ಪಟ್ಟಣ ಸಹಕಾರಿ ಬ್ಯಾಂಕುಗಳ ಕ್ಲೇಮು ಬಿಲ್ಲುಗಳನ್ನು ಸಂಬಂಧಪಟ್ಟ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ತಯಾರಿಸಿ ಜಿಲ್ಲೆಗೆ ಸಂಬಂಧಪಟ್ಟ ಲೆಕ್ಕಪರಿಶೋಧನಾ ಸಹಾಯಕ/ ಉಪನಿರ್ದೇಶಕರಿಂದ ಪ್ರಮಾಣಿಕರಿಸಿದ ನಂತರ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು ದೃಢೀಕರಿಸಿ ಸಹಕಾರ ಸಂಘಗಳ ನಿಬಂಧಕರ ಕಚೇರಿಯ ಸಹಕಾರ ಸಂಘಗಳ ಜಂಟಿ ನಿಬಂಧಕರು (ಪಟ್ಟಣ ಬ್ಯಾಂಕ್ ಶಾಖೆ) ಇವರಿಗೆ ಸಲ್ಲಿಸತಕ್ಕದ್ದು.

14) ಕೃಷಿ ಪತ್ತಿನ ಸಹಕಾರ ಸಂಘಗಳಿಗೆ ಸಂಬಂಧಿಸಿದಂತೆ ಅಪೆಕ್ಸ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು, ಪಿಕಾರ್ಡ್ ಬ್ಯಾಂಕುಗಳಿಗೆ ಸಂಬಂಧಿಸಿದಂತೆ ಕಸ್ಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಹಾಗೂ ಪಟ್ಟಣ ಸಹಕಾರ ಬ್ಯಾಂಕುಗಳಿಗೆ ಸಂಬಂಧಿಸಿದಂತೆ ಸಹಕಾರ ಸಂಘಗಳ ನಿಬಂಧಕರ ಕಚೇರಿಯಲ್ಲಿರುವ ಸಹಕಾರ ಸಂಘಗಳ ಜಂಟಿ ನಿಬಂಧಕರು (ಪಟ್ಟಣ ಬ್ಯಾಂಕ್ ಶಾಖೆ) ಇವರು ಎಲ್ಲಾ ಕ್ಲೇಮು ಬಿಲ್ಲುಗಳನ್ನು ಪ್ರಮಾಣೀಕರಿಸಿ ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸತಕ್ಕದ್ದು. ಸಹಕಾರ ಸಂಘಗಳ ನಿಬಂಧಕರು ಸದರಿ ಬಿಲ್ಲುಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸಂಬಂಧಪಟ್ಟ ಸಹಕಾರ ಸಂಘ / ಸಹಕಾರ ಬ್ಯಾಂಕುಗಳಿಗೆ ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನ ಮುಖಾಂತರ ಹಣ ಬಿಡುಗಡೆ ಮಾಡತಕ್ಕದ್ದು.

15) ಸಾಲ ಪಡೆಯುವ ರೈತರ ಪೈಕಿ ಹೊಸದಾಗಿ ಸಾಲ ಪಡೆಯುವ ರೈತರಿಗೆ ಆದ್ಯತೆ ನೀಡತಕ್ಕದ್ದು.

16) ಈ ಯೋಜನೆಯಡಿ ಅನುದಾನದ ಬಿಡುಗಡೆಯು ಕರ್ನಾಟಕ ಆರ್ಥಿಕ ಸಂಹಿತೆಯ ಪರಿಚ್ಛೇದ 161(ಬಿ)(2), ಪರಿಚ್ಛೇದ 101(ಬಿ)(5)(111)ರಡಿಯ ಟಿಪ್ಪಣಿ–2 ಹಾಗೂ ಪರಿಚ್ಛೇದ 101(ಬಿ)(6)(11)ರ ಅವಕಾಶಗಳ ಪಾಲನೆಗೆ ಒಳಪಟ್ಟಿರುತ್ತದೆ.

17) ಸಹಕಾರ ಸಂಘಗಳ ನಿಬಂಧಕರು ಸಂಬಂಧಪಟ್ಟ ಪುನರ್ಭರಣ ಬಿಲ್ಲುಗಳು ಪರಿಶೀಲನೆ ಆದ ನಂತರ ದೃಢೀಕೃತ ಬಿಲ್ಲುಗಳ ಆಧಾರದ ಮೇಲೆ ಸಂಬಂಧಪಟ್ಟ ಸಂಸ್ಥೆಗಳಿಗೆ ಹಣವನ್ನು ಬಿಡುಗಡೆ ಮಾಡತಕ್ಕದ್ದು ಹಾಗೂ ಹಣದ ಉಪಯೋಗದ ಬಗ್ಗೆ ತ್ರೈಮಾಸಿಕ ಪ್ರಗತಿ ವರದಿಗಳನ್ನು ಸಲ್ಲಿಸತಕ್ಕದ್ದು ಮತ್ತು ನಿಗದಿತ ನಮೂನೆಯಲ್ಲಿ ಉಪಯೋಗ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

18) ಸಹಕಾರ ಸಂಘಗಳ ನಿಬಂಧಕರು ಈ ಯೋಜನೆಯನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಅಗತ್ಯವಾದ ಎಲ್ಲಾ ಕ್ರಮಗಳನ್ನು ಕೈಗೊಳ್ಳತಕ್ಕದ್ದು ಮತ್ತು ಅಗತ್ಯವಾದ ಮಾರ್ಗದರ್ಶನ ಮತ್ತು ಸೂಚನೆಗಳನ್ನು ನೀಡಲು ಸಕ್ಷಮರಾಗಿರತಕ್ಕದ್ದು.

and debt position of the State; and States progress on its fiscal correction path and to advice corrective measures as may be required. The procedure and modalities for review shall be such as may be prescribed.

(2A) The Minister in charge of finance shall review every half year the trends in receipt and expenditure in relation to the Budget, remedial measures to be taken to achieve budget targets as recommended by the Fiscal Management Review Committee and place before both the houses of Legislature the outcome of such reviews. The review report shall be in such form as may be prescribed."

**5. Amendment of section 11.-** In section 11 of the principal Act, in sub-section (1), for the proviso, the following shall be substituted, namely:-

"Provided that no order shall be made under this section after the expiry of two years from the date of commencement of the Karnataka Fiscal Responsibility (Amendment) Act, 2011."

The above translation of the ಕರ್ನಾಟಕ ಆರ್ಥಿಕ ಹೊಣೆಗಾರಿಕೆ (ತಿದ್ದುಪಡಿ) ಅಧಿನಿಯಮ, 2011 (2011ರ ಕರ್ನಾಟಕ ಅಧಿನಿಯಮ ಸಂಖ್ಯೆ: 13) be published in the Official Gazette under clause (3) of Article 348 of the Constitution of India.

**H.R. BHARDWAJ**
GOVERNOR OF KARNATAKA

By order and in the name of the Governor of Karnataka,
**G.K. BOREGOWDA**
Secretary to Government
Department of Parliamentary Affairs and Legislation


# ವಿಶೇಷ ಪತ್ರಿಕೆ

| ಭಾಗ – V | ಬೆಂಗಳೂರು, ಶನಿವಾರ, ಮೇ ೨೧, ೨೦೧೧ (ವೈಶಾಖ ೩೧, ಶಕ ವರ್ಷ ೧೯೩೩) | ನಂ. ೫೨೫ |
|---|---|---|


## ಕರ್ನಾಟಕ ವಿಧಾನ ಸಭೆ ಸಚಿವಾಲಯ

### ಟೆಂಡರ್ ಪ್ರಕಟಣೆ

**ಸಂಖ್ಯೆ: ಕವಿಸಸ/ಶಾ.ಭ/ 100/ಸ್ವಹೊಗು/2011, ಬೆಂಗಳೂರು, ದಿನಾಂಕ: 19.05.2011**

**ವಿಷಯ :** ವಿಧಾನ ಮಂಡಲದ ಶಾಸಕರ ಭವನದ ಎಲ್ಲಾ ಕಟ್ಟಡಗಳು ಹಾಗೂ ವಿಧಾನ ಮಂಡಲದ ವ್ಯಾಪ್ತಿಗೆ ಬರುವ ಕಾವೇರಿ ಅತಿಥಿ ಗೃಹದ ಮೊದಲನೆ ಮಹಡಿಯ ಕೊಠಡಿಗಳು, ಹೊರ ಆವರಣ ಹಾಗೂ ಇತರೆ ಸಂಬಂಧಿತ ಸ್ಥಳಗಳ ಯಾಂತ್ರೀಕೃತ ಹಾಗೂ ಸ್ವಯಂ ಚಾಲಿತ ನೈರ್ಮಲ್ಯತೆ ಹಾಗೂ ಭದ್ರತಾ ಕೆಲಸಗಳಿಗೆ ಹೊರಗುತ್ತಿಗೆ ನೀಡಲು ಟೆಂಡರ್ ಕರೆಯುವಿಕೆ.

ವಿಧಾನ ಮಂಡಲದ ಶಾಸಕರ ಭವನದ ಎಲ್ಲಾ ಕಟ್ಟಡಗಳು, ಸಾರ್ವಜನಿಕ ಶೌಚಾಲಯ ಹಾಗೂ ಕಾವೇರಿ ಅತಿಥಿ ಗೃಹದ ಮೊದಲನೆ ಮಹಡಿಯಲ್ಲಿ ವಿಧಾನ ಮಂಡಲದ ವ್ಯಾಪ್ತಿಗೆ ಬರುವ ಕೊಠಡಿಗಳು, ಹೊರ ಆವರಣ ಹಾಗೂ ಇತರೆ ಸಂಬಂಧಿತ ಸ್ಥಳಗಳ ಯಾಂತ್ರೀಕೃತ ಹಾಗೂ ಸ್ವಯಂ ಚಾಲಿತ ನೈರ್ಮಲ್ಯತೆ ಹಾಗೂ ಭದ್ರತೆ ಕೆಲಸಗಳನ್ನು ನಿರ್ವಹಿಸಲು ಆ ಕ್ಷೇತ್ರಗಳಲ್ಲಿ ಪರಿಣಿತಿ ಇರುವ ಪ್ರಸಿದ್ಧ ಮತ್ತು ಅರ್ಹ ಸಂಸ್ಥೆಗಳಿಂದ ಮೊಹರು ಮಾಡಿದ ಟೆಂಡರನ್ನು ಈ ಮೂಲಕ ಕರೆಯಲಾಗಿದೆ. ವಿಧಾನ ಮಂಡಲದ ಶಾಸಕರ ಭವನದ ಕಟ್ಟಡಗಳ, ಶಾಸಕರ ಭವನದ ಮುಂಭಾಗದ ಆವರಣದಲ್ಲಿರುವ ಶೌಚಾಲಯ ಹಾಗೂ ಕಾವೇರಿ ಅತಿಥಿ ಗೃಹದ ಮೊದಲನೆ ಮಹಡಿಯಲ್ಲಿ ವಿಧಾನ ಮಂಡಲದ ವ್ಯಾಪ್ತಿಗೆ ಬರುವ ಕೊಠಡಿಗಳ ವಿವರಗಳು ಕಾರಿಡಾರ್, ಪೋರ್ಟಿಕೋ, ಸ್ಟೇರ್‌ಕೇಸ್, ಅಂದಾಜು **ಗ್ಲಾಸ್ ಏರಿಯಾ** (ಕಿಟಕಿಗಳು ಸೇರಿದಂತೆ) ಹಾಗೂ ಸಾಮಾನ್ಯ ಉಪಯೋಗದ ಸ್ಥಳಾವಕಾಶ, ಶೌಚಾಲಯಗಳ ವಿವರಗಳು ಮತ್ತು ಒಟ್ಟು ವಿಸ್ತೀರ್ಣದ ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ.

1. ಮೊಹರು ಮಾಡಿರುವ **ಟೆಂಡರ್ ಲಕೋಟೆಯ ಮೇಲೆ ಕರ್ನಾಟಕ** ವಿಧಾನ ಮಂಡಲದ ಶಾಸಕರ ಭವನದ ಕಟ್ಟಡಗಳು, ಶಾಸಕರ ಭವನದ ಮುಂಭಾಗದ ಶೌಚಾಲಯ ಹಾಗೂ ವಿಧಾನ ಮಂಡಲದ ವ್ಯಾಪ್ತಿಗೆ ಬರುವ ಕಾವೇರಿ ಅತಿಥಿ ಗೃಹದ ಮೊದಲನೇ ಮಹಡಿಯ ಕೊಠಡಿಗಳ ಯಾಂತ್ರೀಕೃತ ಮತ್ತು ಸ್ವಯಂ ಚಾಲಿತ ಸ್ವಚ್ಛತೆ ಹಾಗೂ ಭದ್ರತೆ ಬಗ್ಗೆ ಗುತ್ತಿಗೆ ಎಂದು ಬರೆಯತಕ್ಕದ್ದು.

2. ಟೆಂಡರ್ ಅರ್ಜಿ ನಮೂನೆಯನ್ನು ರೂ.570/-ಗಳ (ನಮೂನೆ ದರ ರೂ.500/- +ಶೇಕಡ 14ರ ಮೌಲ್ಯವರ್ಧಿಕ ತೆರಿಗೆ ರೂ.70/- ನ್ನು) ಬ್ಯಾಂಕ್ ಡ್ರಾಫ್ಟ್‌ನ್ನು ಪ್ರಧಾನ ಕಾರ್ಯದರ್ಶಿ, ಕರ್ನಾಟಕ ವಿಧಾನ ಮಂಡಲ ಇವರ ಹೆಸರಿಗೆ ಪಡೆದು ಅದನ್ನು ದಿನಾಂಕ:02.06.2011ರಂದು ಮಧ್ಯಾಹ್ನ 3.00 ಗಂಟೆಯೊಳಗಾಗಿ ಕ್ಷೇತ್ರಾಧಿಕಾರಿ, ಶಾಸಕರ ಭವನ -2 (ಕರ್ನಾಟಕ ವಿಧಾನ ಸಭೆ) ಇವರಿಂದ ಪಡೆದುಕೊಳ್ಳಬಹುದು.

3. ಭದ್ರತೆ ಹಾಗೂ ಸ್ವಚ್ಛತಾ ಕಾರ್ಯವನ್ನು ನಿರ್ವಹಿಸಲು ಸಿದ್ದವಿರುವ ಸಂಸ್ಥೆಯು ಟೆಂಡರ್‌ನೊಂದಿಗೆ ರೂ.15,00,000-00 (ಹದಿನೈದು ಲಕ್ಷ ರೂಪಾಯಿಗಳು ಮಾತ್ರ)ಗಳ ಇ.ಎಂ.ಡಿ. ಮೊತ್ತಕ್ಕೆ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಬ್ಯಾಕ್ ಡ್ರಾಫ್ಟ್/ಬ್ಯಾಂಕರ್ಸ್ ಚೆಕ್ಕನ್ನು ಅಥವಾ ಬ್ಯಾಂಕ್ ಗ್ಯಾರಂಟಿಯನ್ನು ಪ್ರಧಾನ ಕಾರ್ಯದರ್ಶಿ, ವಿಧಾನ ಮಂಡಲ ಇವರ ಹೆಸರಿಗೆ ಪಡೆದು, ಅದನ್ನು ಟೆಂಡರ್‌ನೊಂದಿಗೆ ಲಗತ್ತಿಸಿ ಪ್ರಧಾನ ಕಾರ್ಯದರ್ಶಿ, ಕರ್ನಾಟಕ ವಿಧಾನ ಮಂಡಲ, ಕೊಠಡಿ ಸಂಖ್ಯೆ: 228, 2ನೇ ಮಹಡಿ, ವಿಧಾನ ಸೌಧ, ಬೆಂಗಳೂರು ಇವರಿಗೆ ಸಂಬೋಧಿಸಿ ಸಲ್ಲಿಸತಕ್ಕದ್ದು.

4. ಗೊತ್ತುಪಡಿಸಿದ ಅರ್ಜಿ ನಮೂನೆಯಲ್ಲಿ ನಿಗದಿತ ದಿನಾಂಕ ಮತ್ತು ಸಮಯದೊಳಗೆ ಇ.ಎಂ.ಡಿ. ಮೊತ್ತಕ್ಕೆ ಬ್ಯಾಂಕ್ ಡ್ರಾಫ್/ಬ್ಯಾಂಕರ್ಸ್ ಚೆಕ್/ಬ್ಯಾಂಕ್ ಗ್ಯಾರಂಟಿ ಹಾಗೂ ಟೆಂಡರ್‌ನ ಷರತ್ತು ಮತ್ತು ನಿಬಂಧನೆಗಳಲ್ಲಿ ತಿಳಿಸಿರುವ ಎಲ್ಲಾ ದಾಖಲೆಗಳೊಂದಿಗೆ ಟೆಂಡರ್‌ಗಳನ್ನು ಸಲ್ಲಿಸದೇ ಇದ್ದಲ್ಲಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

5. ನಿಬಂಧನೆಗಳಿಗನುಗುಣವಾಗಿ ಸೂಚಿಸಲಾದ ದಾಖಲೆಗಳೊಂದಿಗೆ ಮೊಹರು ಮಾಡಿದ ಟೆಂಡರ್ ಲಕೋಟೆಯನ್ನು (ಎರಡು ಲಕೋಟೆ ಪದ್ದತಿಯಲ್ಲಿ) ದಿನಾಂಕ:17.06.2011ರಂದು ಮದ್ಯಾಹ್ನ 3.00 ಗಂಟೆಯ ಒಳಗೆ ತಲುಪುವಂತೆ ಅಂಚೆಯ ಮೂಲಕ, ಕೊರಿಯರ್ ಮೂಲಕ ಅಥವಾ ಖುದ್ದಾಗಿ ಸಲ್ಲಿಸಬಹುದಾಗಿದೆ.

6. (i) ಕೇಂದ್ರ ಸರ್ಕಾರದ ಅಥವಾ ರಾಜ್ಯ ಸರ್ಕಾರಗಳ ಭದ್ರತಾ ಹಾಗೂ ಅತೀ ಸೂಕ್ಷ್ಮ ವಿಭಾಗಗಳಲ್ಲಿ ಕನಿಷ್ಠ ಪಕ್ಷ ಮೂರು ವರ್ಷಗಳು ತೃಪ್ತಿಕರವಾಗಿ ಮೇಲೆ ತಿಳಿಸಿದಂತಹ ಸೇವೆಯನ್ನು ನಿರ್ವಹಿಸಿರುವ ಸಂಸ್ಥೆಗಳಿಗೆ ಆದ್ಯತೆಯನ್ನು ನೀಡಲಾಗುತ್ತದೆ.

   (ii) ಕೇಂದ್ರ ಸರ್ಕಾರದ/ರಾಜ್ಯ ಸರ್ಕಾರದ ಅಥವಾ ಬೇರೆ ಯಾವುದೇ ಮೂರು ಸಂಸ್ಥೆಗಳಲ್ಲಿ ಇದೇ ರೀತಿಯ ಕಾರ್ಯವನ್ನು ವಾರ್ಷಿಕ ಕನಿಷ್ಠ ರೂ.2.0 ಕೋಟಿ ದರದಲ್ಲಿ ನಿರ್ವಹಿಸಿರಬೇಕು.

7. ಟೆಂಡರ್‌ನಲ್ಲಿ ಭಾಗವಹಿಸುವ ಸಂಸ್ಥೆಗಳು ಯಾಂತ್ರಿಕೃತ ಮತ್ತು ಸ್ವಯಂ ಚಾಲಿತ ಸ್ವಚ್ಛತೆ ಹಾಗೂ ಸಾಮಾನ್ಯ ನಿರ್ವಹಣೆ ಮತ್ತು ಭದ್ರತೆ ಕೆಲಸದಲ್ಲಿ ISO-9001-2000 ಪ್ರಮಾಣ ಪತ್ರವನ್ನು ಪಡೆದು ಕನಿಷ್ಠ ಮೂರು ವರ್ಷಗಳಾಗಿರಬೇಕು.

8. ಯಾವುದೇ ರಾಷ್ಟ್ರೀಕೃತ ಬ್ಯಾಂಕ್‌ನ ಆರು ತಿಂಗಳೊಳಗೆ ಸಂಸ್ಥೆಗೆ ನೀಡಿರುವ ಕನಿಷ್ಠ 20 ಕೋಟಿ ರೂಪಾಯಿಗಳ ಸಾಲ್‌ವೆನ್ಸಿ ಪ್ರಮಾಣ ಪತ್ರವನ್ನು ಲಗತ್ತಿಸಿರಬೇಕು.

9. ಇ.ಎಸ್.ಐ., ಪ್ರಾವಿಡೆಂಟ್ ಫಂಡ್, ವ್ಯಾಟ್, ಸರ್ವಿಸ್ ಟ್ಯಾಕ್ಸ್, ಲೇಬರ್ ಲೈಸನ್ಸ್, ಇತ್ಯಾಧಿಗಳ ಬಗ್ಗೆ ಸಂಬಂಧಿತ ಇಲಾಖೆಗಳು ನಿಗದಿಪಡಿಸಿರುವ ಅಗತ್ಯ ನೀತಿ/ನಿಯಮಗಳನ್ನು ಪಾಲಿಸಿರುವ / ಪಾಲಿಸುವ ಬಗ್ಗೆ ದೃಢೀಕೃತ ಪತ್ರಗಳನ್ನು ಹಾಗೂ ಆದಾಯ ತೆರಿಗೆ IT Certificate ಪ್ರಮಾಣ ಪತ್ರಗಳನ್ನು ಲಗತ್ತಿಸಬೇಕು.

10. ಷರತ್ತು 7, 8 ಹಾಗೂ 9ರಲ್ಲಿ ಸೂಚಿಸಿರುವ ಪ್ರಮಾಣ ಪತ್ರ / ದಾಖಲೆಗಳನ್ನು ಚಾರ್ಟರ್ಡ್ ಅಕೌಂಟೆಂಟ್ ಅವರಿಂದ ಪ್ರಮಾಣಿಕರಿಸಿರತಕ್ಕದ್ದು.

11. ಟೆಂಡರ್‌ನಲ್ಲಿ ಭಾಗವಹಿಸುವ ಸಂಸ್ಥೆಯ ವಾರ್ಷಿಕ ವಹಿವಾಟು ಕನಿಷ್ಠ ರೂ.2 ಕೋಟಿಗಿಂತ ಹೆಚ್ಚಾಗಿರಬೇಕು. ಟೆಂಡರ್‌ದಾರರ ಕಳೆದ ಮೂರು ವರ್ಷಗಳಲ್ಲಿನ ಸಂಸ್ಥೆಯ ವಹಿವಾಟಿನ (Balance Sheet) ವಿವರಗಳನ್ನು ಚಾರ್ಟರ್ಡ್ ಅಕೌಂಟೆಂಟ್ ಅವರಿಂದ ಸೂಕ್ತವಾಗಿ ದೃಢೀಕರಿಸಿ ಸಲ್ಲಿಸತಕ್ಕದ್ದು.

**12. ಒಂದನೇಯ ಕವರಿನಲ್ಲಿಡಬೇಕಾದ ದಾಖಲೆಗಳು:**

(ಅ) ಟೆಂಡರ್ ಫಾರಂ ಖರೀದಿಸಿದ ಹಣ ಪಾವತಿಯ ಮೂಲ ರಸೀದಿ.

(ಆ) ಪ್ರಧಾನ ಕಾರ್ಯದರ್ಶಿ, ಕರ್ನಾಟಕ ವಿಧಾನ ಮಂಡಲ ಇವರ ಹೆಸರಲ್ಲಿ ಪಡೆದಿರುವ ಇ.ಎಂ.ಡಿ. ಮೊತ್ತಕ್ಕೆ ಡಿ.ಡಿ/ಬ್ಯಾಂಕರ್ಸ್ ಚೆಕ್/ಬ್ಯಾಂಕ್ ಗ್ಯಾರಂಟಿ.

(ಇ) ಷರತ್ತು 8 ರಿಂದ 11ರವರೆಗೆ ತಿಳಿಸಿರುವ ದಾಖಲೆಗಳ ಪ್ರತಿಗಳು.

13. **ಎರಡನೇ ಕವರಿನಲ್ಲಿಡಬೇಕಾದ ದಾಖಲೆಗಳು:**

(1) ಯಾಂತ್ರೀಕೃತ ಮತ್ತು ಸ್ವಯಂ ಚಾಲಿತ ಸ್ವಚ್ಛತೆ, ಸಾಮಾನ್ಯ ನಿರ್ವಹಣೆ ಹಾಗೂ ಭದ್ರತೆಗೆ ತಗಲುವ ವಾರ್ಷಿಕ ದರ (ತೆರಿಗೆ ಇತ್ಯಾದಿಗಳನ್ನು ಒಳಗೊಂಡಂತೆ)

(2) ಟೆಂಡರ್‌ನಲ್ಲಿನ ಮೊತ್ತವನ್ನು ಅಂಕಿಯಲ್ಲಿ ಹಾಗೂ ಅಕ್ಷರದಲ್ಲಿ ತಪ್ಪಿಲ್ಲದಂತೆ ನಮೂದಿಸಿರಬೇಕು ಮತ್ತು ಟೆಂಡರ್‌ದಾರರು ಸಹಿ ಹಾಕಿರಬೇಕು.

(3) ಟೆಂಡರ್‌ದಾರರು ಯಾಂತ್ರಿಕೃತ ಹಾಗೂ ಸ್ವಯಂ ಚಾಲಿತ ನೈರ್ಮಲ್ಯತೆ ಹಾಗೂ ಭದ್ರತಾ ಕಾರ್ಯವನ್ನು ನಿರ್ವಹಿಸುತ್ತಿರುವ ಇಲಾಖೆಗಳ/ಸಂಸ್ಥೆಗಳ ಹೆಸರು, ವಿಳಾಸ, ದೂರವಾಣಿ ಸಂಖ್ಯೆಗಳು ಮುಂತಾದ ವಿವರಗಳು.

14. ಟೆಂಡರನ್ನು ದಿನಾಂಕ:18.06.2011ರಂದು ಮಧ್ಯಾಹ್ನ 3.00 ಗಂಟೆಗೆ ಪ್ರಧಾನ ಕಾರ್ಯದರ್ಶಿ, ಕರ್ನಾಟಕ ವಿಧಾನ ಮಂಡಲ, ಕೊಠಡಿ ಸಂಖ್ಯೆ:228, 2ನೇ ಮಹಡಿ, ವಿಧಾನ ಸೌಧ, ಬೆಂಗಳೂರು ಇವರ ಕಛೇರಿಯಲ್ಲಿ ಹಾಜರಾಗುವ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು.

15. ಮೊದಲನೇ ಲಕೋಟೆಯಲ್ಲಿ ಸೂಚಿಸಿರುವ ಅವಶ್ಯ ದಾಖಲೆಗಳು ಲಭ್ಯವಿಲ್ಲದ ಪಕ್ಷದಲ್ಲಿ ಎರಡನೇ ಲಕೋಟೆಯನ್ನು ತೆರೆಯಲಾಗುವುದಿಲ್ಲ ಹಾಗೂ ಅಂತಹ ಟೆಂಡರ್‌ನ್ನು ತಿರಸ್ಕರಿಸಲಾಗುವುದು.

16. ಗುತ್ತಿಗೆ ಅವಧಿಯು ಗುತ್ತಿಗೆ ನೀಡಿದ ದಿನಾಂಕದಿಂದ ಎರಡು ವರ್ಷದ ಅವಧಿಗೆ ಮಾತ್ರ ಜಾರಿಯಲ್ಲಿರುವುದು. ಈ ಅವಧಿಯಲ್ಲಿ ಗುತ್ತಿಗೆದಾರರ ಸೇವೆಯು ತೃಪ್ತಿಕರವಾಗಿದ್ದಲ್ಲಿ ಇನ್ನೂ ಎರಡು ವರ್ಷಗಳಿಗೆ ಮಾನ್ಯ ಸಭಾಪತಿಯವರು, ಕರ್ನಾಟಕ ವಿಧಾನ ಪರಿಷತ್ತು ಹಾಗೂ ಮಾನ್ಯ ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ ಮತ್ತು ಗುತ್ತಿಗೆದಾರರು ಒಪ್ಪಿಕೊಳ್ಳಬಹುದಾದ ನಿಬಂಧನೆಗಳಿಗೆ ಒಳಪಟ್ಟು ಗುತ್ತಿಗೆಯ ಅವಧಿಯನ್ನು ಮುಂದುವರೆಸಬಹುದು. ಗುತ್ತಿಗೆದಾರರು ಎರಡು ವರ್ಷದ ಪೂರ್ಣ ಅವಧಿಗೆ ಗುತ್ತಿಗೆ ದರವನ್ನು ನಮೂದಿಸತಕ್ಕದ್ದು. ನಮೂದಿಸುವ ದರವು ತೆರಿಗೆ ಇತ್ಯಾಧಿಗಳನ್ನು ಒಳಗೊಂಡಿರಬೇಕು.

17. ಯಶಸ್ವಿ ಟೆಂಡರ್‌ದಾರರು ವಾರ್ಷಿಕ ಗುತ್ತಿಗೆ ಮೊತ್ತದ ಶೇಕಡ 10ರಷ್ಟು ಮೊತ್ತವನ್ನು ಭದ್ರತಾ ಠೇವಣಿಯಾಗಿ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಬ್ಯಾಂಕ್ ಗ್ಯಾರಂಟಿಯನ್ನು ಪ್ರಧಾನ ಕಾರ್ಯದರ್ಶಿ, ಕರ್ನಾಟಕ ವಿಧಾನ ಮಂಡಲ, ಅವರಿಗೆ ಸಂಬೋಧಿಸಿ ಸಲ್ಲಿಸತಕ್ಕದ್ದು. ಇದಕ್ಕೆ ಬದಲಾಗಿ ಇದೇ ಮೊತ್ತಕ್ಕೆ ಡಿ.ಡಿ. ಅಥವಾ ಬ್ಯಾಂಕರ್ಸ್ ಚೆಕ್ಕನ್ನು ಪ್ರಧಾನ ಕಾರ್ಯದರ್ಶಿ, ಕರ್ನಾಟಕ ವಿಧಾನ ಮಂಡಲ ಅವರ ಹೆಸರಿಗೆ ಪಡೆದು ಸಲ್ಲಿಸಬಹುದಾಗಿರುತ್ತದೆ. ಈ ಮೊತ್ತವನ್ನು ಗುತ್ತಿಗೆ ಅವಧಿ ಮುಗಿದ ನಂತರ ಗುತ್ತಿಗೆದಾರರಿಂದ ವಿಧಾನ ಸಭೆ ಸಚಿವಾಲಯಕ್ಕೆ ಯಾವುದೇ ಬಾಕಿ ಇಲ್ಲದಿದ್ದಲ್ಲಿ ಬಡ್ಡಿ ರಹಿತವಾಗಿ ಹಿಂತಿರುಗಿಸಲಾಗುವುದು.

18. ಅಯಶಸ್ವಿ ಟೆಂಡರ್‌ದಾರರ ಇ.ಎಂ.ಡಿ. ಮೊತ್ತವನ್ನು ಟೆಂಡರ್ ಪ್ರಕ್ರಿಯೆ ಮುಗಿದ ನಂತರ ಬಡ್ಡಿ ರಹಿತವಾಗಿ ಹಿಂದಿರುಗಿಸಲಾಗುವುದು.

19. ಈ ಗುತ್ತಿಗೆಯು ಈ ಕೆಳಗಿನ ನಿಬಂಧನೆಗಳಿಗೆ ಒಳಪಟ್ಟಿರುತ್ತದೆ.

**ಸಾಮಾನ್ಯ ನಿಬಂಧನೆಗಳು (ಎರಡೂ ಸೇವೆಗಳಿಗೆ ಅನ್ವಯವಾಗುವಂತೆ)**

01) ಬೆಂಗಳೂರು ನಗರದ ವ್ಯಾಪ್ತಿಯಲ್ಲಿ ಇರುವ ಸಂಸ್ಥೆಗಳು ಅಥವಾ ಬೆಂಗಳೂರಿನಲ್ಲಿ ತಮ್ಮ ಶಾಖೆಯನ್ನು ಹೊಂದಿರುವ ಸಂಸ್ಥೆಗಳು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸತಕ್ಕದ್ದು.

02) ಈ ಕ್ಷೇತ್ರದಲ್ಲಿ ಕನಿಷ್ಠ 3 ವರ್ಷಗಳ ಅನುಭವ ಇರುವ ಸಂಸ್ಥೆಗಳೂ ಮಾತ್ರ ಟೆಂಡರ್‌ನಲ್ಲಿ ಭಾಗವಹಿಸತಕ್ಕದ್ದು.

03) ಈ ಟೆಂಡರ್‌ನಲ್ಲಿ ಭಾಗವಹಿಸುವ ಸಂಸ್ಥೆಯು ಈ ಕ್ಷೇತ್ರದಲ್ಲಿ ತಮಗಿರುವ ಅನುಭವ ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಸಂಸ್ಥೆ/ಇಲಾಖೆ/ಕಛೇರಿಗಳ ವಿವರಗಳನ್ನು ದಾಖಲೆಗಳೊಂದಿಗೆ ಒದಗಿಸುವುದು.

04) ಈ ಟೆಂಡರ್‌ನಲ್ಲಿ ಭಾಗವಹಿಸುವ ಸಂಸ್ಥೆಗಳು ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿದ್ದು, ಸಂಸ್ಥೆಯ ಸಿಬ್ಬಂದಿಗೆ ಸೂಕ್ತ ಸಮಯದಲ್ಲಿ ವೇತನವನ್ನು ನಿಡುವ ಶಕ್ತಿಯನ್ನು ಹೊಂದಿದ್ದಲ್ಲಿ ಮಾತ್ರ ಟೆಂಡರ್‌ನಲ್ಲಿ ಭಾಗವಹಿಸತಕ್ಕದ್ದು, ಈ ವಿಷಯದ್ದಲ್ಲಿ ಅಗತ್ಯ ದಾಖಲೆಗಳನ್ನು ಒದಗಿಸತಕ್ಕದ್ದು.

05) ಟೆಂಡರ್‌ದಾರರು ಅವರು ಸಲ್ಲಿಸುವ ಟೆಂಡರ್‌ನಲ್ಲಿ ಅವರ ಪೂರ್ಣ ಹೆಸರನ್ನು ನಮೂದಿಸಿ ಸಹಿ ಹಾಕಿರತಕ್ಕದ್ದು. ಅದು ಒಂದು ಸಂಸ್ಥೆಯ ಪರವಾಗಿ ಇದ್ದಲ್ಲಿ ಆ ಸಂಸ್ಥೆಯ ಮಾಲೀಕ ಅಥವಾ ಅವರಿಂದ ನಾಮನಿರ್ದೇಶನ ಮಾಡಲ್ಪಟ್ಟ ವ್ಯಕ್ತಿಯ ಹೆಸರಿನೊಂದಿಗೆ ಸಹಿ ಹಾಕಿರತಕ್ಕದ್ದು.

06) ಪ್ರತಿಯೊಬ್ಬ ಟೆಂಡರ್‌ದಾರನು ತನ್ನ ವಾಸಸ್ಥಳ , ದೂರವಾಣಿ ಸಂಖ್ಯೆ:/ಮೊಬೈಲ್ ಸಂಖ್ಯೆ ಹಾಗೂ ಅಂಚೆ ವಿಳಾಸವನ್ನು ಸ್ಪಷ್ಟವಾಗಿ ಟೆಂಡರ್‌ನಲ್ಲಿ ನಮೂದಿಸತಕ್ಕದ್ದು.

07) ಯಶಸ್ವಿ ಟೆಂಡರ್‌ದಾರರು ಗುತ್ತಿಗೆಯನ್ನು ಬೇರೆಯವರಿಗೆ ವರ್ಗಾಯಿಸುವಂತಿಲ್ಲ. ಹಾಗೂ ಉಪ ಗುತ್ತಿಗೆ (Sub Contract)ಗೆ ನೀಡುವಂತಿಲ್ಲ.

08) ಯಶಸ್ವಿ ಟೆಂಡರ್‌ದಾರರು ಪಾಲುಗಾರಿಕೆಯಲ್ಲಿ ಈ ಕಾರ್ಯವನ್ನು ನಿರ್ವಹಿಸುವಂತಿಲ್ಲ.

09) ಯಾವುದೇ ಕಾರಣವನ್ನು ನೀಡದೇ ಟೆಂಡರುಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಪ್ರಧಾನ ಕಾರ್ಯದರ್ಶಿ, ಕರ್ನಾಟಕ ವಿಧಾನ ಮಂಡಲ ಅವರು ಕಾಯ್ದಿರಿಸಿಕೊಂಡಿದ್ದಾರೆ. ಇದಕ್ಕಾಗಿ ಅವರು ಯಾವುದೇ ಕಾರಣಗಳನ್ನು ನೀಡಬೇಕಾಗಿಲ್ಲ.

10) ಗುತ್ತಿಗೆ ನಡೆಸುವಲ್ಲಿ ಯಾವುದೇ ವ್ಯಾಜ್ಯವುಂಟಾದಲ್ಲಿ ಮಾನ್ಯ ಸಭಾಧ್ಯಕ್ಷರ ಹಾಗೂ ಮಾನ್ಯ ಸಭಾಪತಿಗಳ ತೀರ್ಮಾನವೇ ಅಂತಿಮವಾಗಿರುತ್ತದೆ.

11) ಈ ಟೆಂಡರ್‌ನಲ್ಲಿ ಭಾಗವಹಿಸುವ ಸಂಸ್ಥೆಗಳು ಸ್ವಚ್ಛತೆ, ಸಾಮಾನ್ಯ ನಿರ್ವಹಣೆ ಹಾಗೂ ಭದ್ರತೆಗೆ ಸಂಬಂಧಿಸಿದಂತೆ ವಿಧಿಸುವ ಒಟ್ಟು ದರವನ್ನು (ತೆರಿಗೆಯೂ ಸೇರಿದಂತೆ) ನಮೂದಿಸತಕ್ಕದ್ದು.

12) ಸ್ವಚ್ಛತೆ ಮತ್ತು ಸಾಮಾನ್ಯ ನಿರ್ವಹಣೆ ಹಾಗೂ ಭದ್ರತೆಗೆ ಯಾವ ಯಾವ ಸ್ಥರದ ಎಷ್ಟು ಸಿಬ್ಬಂದಿಯನ್ನು ನೇಮಿಸಲಾಗುವುದು ಮತ್ತು ಈ ಸೇವೆಗಳನ್ನು ಪಾಳಿಗಳಲ್ಲಿ ನಿರ್ವಹಿಸಬೇಕಾಗಿರುವುದರಿಂದ ಪ್ರತಿ ಸೇವೆಗೆ ಎಷ್ಟು ಸಿಬ್ಬಂದಿಯನ್ನು ನೇಮಿಸಲಾಗುವುದು ಎಂಬುದು ಸ್ಪಷ್ಟಪಡಿಸತಕ್ಕದ್ದು.

13) ಈ ಸೇವೆಗಳಿಗೆ ನೇಮಿಸಲ್ಪಡುವ ಅಧಿಕಾರಿ / ಸಿಬ್ಬಂದಿಗೆ ಕನಿಷ್ಠ ವೇತನ ಕಾಯ್ದೆ ಅಡಿ ನಿಗದಿಪಡಿಸಿರುವ ವೇತನ, ಭತ್ಯ ಇತರೆ ಸೌಲಭ್ಯಗಳನ್ನು ಅಥವಾ ಅದಕ್ಕಿಂತ ಹೆಚ್ಚಿನ ವೇತನವನ್ನು ನೀಡಲು ಬದ್ದರಾಗಿರಬೇಕು.

14) ಭದ್ರತೆಗೆ ಸಂಬಂಧಿಸಿದ ಕಾರ್ಯಕ್ಕೆ ಮಾಜಿ ಸೈನಿಕರನ್ನು (Ex-Servicemen) ನೇಮಿಸುವಂತಹ ಸಂಸ್ಥೆಗೆ ಆದ್ಯತೆಯನ್ನು ನೀಡಲಾಗುವುದು.

15) ಗುತ್ತಿಗೆದಾರರ ಸಿಬ್ಬಂದಿಯ ಕರ್ತವ್ಯಲೋಪದಿಂದ ಯಾವುದೇ ಹಾನಿ, ಕಳವು ಇತ್ಯಾಧಿ, ಸಂಬಂಧ ಸಚಿವಾಲಯಕ್ಕೆ ನಷ್ಟವುಂಟಾದಲ್ಲಿ ನಷ್ಟದ ಮೊಬಲಗನ್ನು ಟೆಂಡರ್‌ದಾರರೇ ಭರಿಸತಕ್ಕದ್ದು, ಅಥವಾ ಭದ್ರತಾ ಠೇವಣಿಯಿಂದ ಮುರಿದುಕೊಳ್ಳಲಾಗುವುದು.

16) ಟೆಂಡರ್‌ದಾರರು ಟೆಂಡರ್‌ನಲ್ಲಿ ಸೂಚಿಸಬಹುದಾದ ಯಾವುದೇ ನಿಬಂಧನೆಗಳನ್ನು ಪರಿಗಣಿಸುವುದಿಲ್ಲ. ಅವುಗಳನ್ನು ತಿರಸ್ಕರಿಸಲಾಗುತ್ತದೆ.

17) ಟೆಂಡರ್‌ದಾರರು ಸ್ವಚ್ಛತೆ, ಸಾಮಾನ್ಯ ನಿರ್ವಹಣೆ ಹಾಗೂ ಭದ್ರತೆಗಾಗಿ ನೇಮಿಸಿಕೊಳ್ಳುವ/ನಿಯೋಜನೆಗೊಂಡಿರುವ ಕೆಲಸಗಾರರು ಕನಿಷ್ಠ 18 ವರ್ಷದವರಾಗಿರಬೇಕು. ಆರೋಗ್ಯವಂತರು ಹಾಗೂ ದೃಢಕಾಯಕರಾಗಿರಬೇಕು.

18) ಟೆಂಡರ್‌ದಾರರು ನಿಯೋಜಿಸಿಕೊಳ್ಳುವ ಕೆಲಸಗಾರರು ಹಾಗೂ ಮೇಲ್ವಿಚಾರಕರು ಶಾಸಕರ ಭವನದ ಕ್ಷೇತ್ರಾಧಿಕಾರಿ ಮತ್ತು ಇತರೆ ಸಂಬಂಧಿತ ಅಧಿಕಾರಿಗಳ ಆದೇಶದನ್ವಯ ಕಾರ್ಯವನ್ನು ನಿರ್ವಹಿಸತಕ್ಕದ್ದು.

19) ಗುತ್ತಿಗೆದಾರರ ಸಂಸ್ಥೆಯ ಮತ್ತು ಅವರ ನೌಕರರ ಮಧ್ಯೆ ಉದ್ಭವಿಸಬಹುದಾದ ಯಾವುದೇ ವಿವಾದಗಳು ಸಚಿವಾಲಯ/ಶಾಸಕರ ಭವನಕ್ಕೆ ಸಂಬಂಧಿಸಿರುವುದಿಲ್ಲ. ಆದುದರಿಂದ ಗುತ್ತಿಗೆದಾರರ ಸಿಬ್ಬಂದಿಗಳಿಂದ ವೈಯಕ್ತಿಕ ಅಥವಾ ಸಾಮೂಹಿಕವಾಗಿ ಯಾವುದೇ ರೀತಿಯ ಅರ್ಜಿಗಳು/ನಿವೇದನೆಗಳನ್ನು ಸ್ವೀಕರಿಸುವುದಿಲ್ಲ. ಇಂತಹ ಪತ್ರಗಳೇನಾದರೂ ಸಲ್ಲಿಸಿದರೂ ಅವು ಸ್ವಯಂ ತಿರಸ್ಕೃತವೆಂದು ಪರಿಗಣಿಸಲಾಗುವುದು.

20) ಗುತ್ತಿಗೆದಾರರು ನೇಮಿಸುವ ಸಿಬ್ಬಂದಿಯು ಶಾಸಕರ ಭವನದ ಸಿಬ್ಬಂದಿಯ ಜೊತೆ ಹಾಗೂ ಶಾಸಕರ ಭವನದಲ್ಲಿ ವಾಸ್ತವ್ಯ ಹೂಡುವವರೊಂದಿಗೆ ಸೌಜನ್ಯದಿಂದ ವರ್ತಿಸತಕ್ಕದ್ದು.

21) ಟೆಂಡರ್ ಅಂಗೀಕೃತವಾದ ಮೇಲೆ ಟೆಂಡರ್ ಕಾರ್ಯವನ್ನು ಯಾವುದೆ ಕಾರಣಕ್ಕೂ ನಿಲ್ಲಿಸುವಂತಿಲ್ಲ. ತಪ್ಪಿದಲ್ಲಿ ಭದ್ರತಾ ಠೇವಣಿಯಾಗಿ ಇಟ್ಟ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಮರು ಟೆಂಡರ್‌ನಿಂದ ಸಚಿವಾಲಯಕ್ಕೆ ನಷ್ಟವಾದಲ್ಲಿ ಆ ನಷ್ಟಕ್ಕೆ ಗುತ್ತಿಗೆದಾರರನ್ನೇ ಜವಾಬ್ದಾರರನ್ನಾಗಿ ಮಾಡಲಾಗುವುದು. ಅಂಗೀಕೃತ ದರಕ್ಕಿಂತ ಹೆಚ್ಚುವರಿ ದರಕ್ಕೆ ಗುತ್ತಿಗೆದಾರರಿಂದ ಯಾವ ಮನವಿಯನ್ನು ಸ್ವೀಕರಿಸಲಾಗುವುದಿಲ್ಲ. ಗುತ್ತಿಗೆ ಅವಧಿಯಲ್ಲಿ ಯಾವ ಮುಂಗಡವನ್ನು ಮಂಜೂರು ಮಾಡುವುದಿಲ್ಲ.

## ಸ್ವಚ್ಛತೆ ಬಗ್ಗೆ ನಿಬಂಧನೆಗಳು:

01) ಗುತ್ತಿಗೆದಾರರು ಈ ಟೆಂಡರ್‌ನ ಅನುಬಂಧದಲ್ಲಿ ನೀಡಲಾಗಿರುವ ಎಲ್ಲಾ ಸ್ಥಳವನ್ನು ದಿನಂಪ್ರತಿ ಎರಡು ಸಲ ಯಾಂತ್ರಿಕೃತ ಹಾಗೂ ಸ್ವಯಂ ಚಾಲಿತ ಸ್ವಚ್ಛತೆಗೆ ಒಳಪಡಿಸಬೇಕಾಗುತ್ತದೆ.

02) ವಿಧಾನ ಮಂಡಲದ ಶಾಸಕರ ಭವನದ ಕಟ್ಟಡಗಳು ಶಾಸಕರ ಭವನದ ಮುಂಭಾಗದ ಆವರಣದಲ್ಲಿರುವ ಶೌಚಾಲಯ ಹಾಗೂ ಕಾವೇರಿ ಅತಿಥಿ ಗೃಹದ ಮೊದಲನೆ ಮಹಡಿಯಲ್ಲಿ ವಿಧಾನ ಮಂಡಲದ ವ್ಯಾಪ್ತಿಗೆ ಬರುವ ಕೊಠಡಿಗಳ ಸಂಪೂರ್ಣ ಸ್ವಚ್ಛತೆ ಹಾಗೂ ಸಾಮಾನ್ಯ ನಿರ್ವಹಣೆ, ಭದ್ರತಾ ಕಾರ್ಯದ ಜವಾಬ್ದಾರಿ ಗುತ್ತಿಗೆದಾರರದ್ದಾಗಿರುತ್ತದೆ.

03) ಸಾರ್ವತ್ರಿಕ ರಜೆ ಹಾಗೂ ಸರ್ಕಾರಿ ರಜಾ ದಿನಗಳಲ್ಲೂ ಅಲ್ಲದೆ ಭಾನುವಾರವು ಸಹ ಸ್ವಚ್ಛತಾ ಕಾರ್ಯವನ್ನು ಸಂಸ್ಥೆಯು ನಿರ್ವಹಿಸಬೇಕು.

04) ಶಾಸಕರ ಭವನದ ಕೊಠಡಿಗಳಲ್ಲಿರುವ ಮಾನ್ಯ ಸದಸ್ಯರ ಕೊಠಡಿಗಳಲ್ಲಿ ಹಾಗೂ ಅಧಿಕಾರಿಗಳ ಕೊಠಡಿಗಳಲ್ಲಿ ಪ್ರತ್ಯೇಕವಾಗಿ ಶೌಚಾಲಯಗಳಿದ್ದು, ಎಲ್ಲಾ ನೆಲಗಟ್ಟುಗಳಲ್ಲಿ (floor) ಸಾರ್ವಜನಿಕ ಶೌಚಾಲಯಗಳು ಇರುತ್ತವೆ. (ವಿವರಗಳನ್ನು ಈ ಟೆಂಡರ್‌ನ ಅನುಬಂಧದಲ್ಲಿ ಕೊಡಲಾಗಿದೆ.)

05) ವಿಧಾನ ಮಂಡಲದ ಶಾಸಕರ ಭವನದ ಕೊಠಡಿಗಳು, ಕೊಠಡಿಗಳಲ್ಲಿರುವ ಶೌಚಾಲಯಗಳು ಹಾಗೂ ಸಾರ್ವಜನಿಕ ಶೌಚಾಲಯಗಳನ್ನು ದಿನ ಬೆಳಿಗ್ಗೆ 8.00 ಗಂಟೆಯೊಳಗೆ ಸ್ವಚ್ಛಗೊಳಿಸುವುದಲ್ಲದೆ, ಯಾವುದೇ ದುರ್ವಾಸನೆ ಬಾರದಂತೆ ಮತ್ತು ತಿಗಣೆ, ಕ್ರಿಮಿ ಕೀಟ, ಇಲಿಗಳು ಪಕ್ಷಿಗಳು ಬಾರದಂತೆ ಸೂಕ್ತವಾಗಿ ಔಷಧಿಗಳನ್ನು ಇಟ್ಟು ನಿಯಂತ್ರಿಸತಕ್ಕದ್ದು. ಈ ಕ್ರಮವನ್ನು ಮತ್ತೆ ಮಧ್ಯಾಹ್ನ 12.00 ಗಂಟೆಯೊಳಗೆ ಹಾಗೂ ಸಂಜೆ 4.00 ಗಂಟೆಗೆ ಮುಂದುವರೆಸತಕ್ಕದ್ದು.

06) ಕೊಳೆ, ಅನುಪಯುಕ್ತ ವಸ್ತುಗಳು ಚೆಲ್ಲಿರುವ ವಸ್ತುಗಳನ್ನು ಇತ್ಯಾಧಿಗಳನ್ನು ಸ್ವಚ್ಛಗೊಳಿಸತಕ್ಕದ್ದು.

07) ಸ್ವಚ್ಛತಾ ಸಿಬ್ಬಂದಿಯ ಮೇಲ್ವಿಚಾರಣೆಗೆ ಅನುಭವಸ್ಥ ಮೇಲ್ವಿಚಾರಕರನ್ನು ನೇಮಿಸತಕ್ಕದ್ದು.

08) ಗಿಡಕುಂಡಗಳು ಹಾಗೂ ನಾಮ ಫಲಕಗಳನ್ನು ಆಗಿಂದಾಗ್ಗೆ ಸ್ವಚ್ಛಗೊಳಿಸತಕ್ಕದ್ದು.

09) ಇದಲ್ಲದೆ ಸಂಬಂಧಪಟ್ಟ ಅಧಿಕಾರಿಗಳು ಈ ವಿಷಯದಲ್ಲಿ ನೀಡುವ ಸೂಚನೆಗಳನ್ನು ಪಾಲಿಸತಕ್ಕದ್ದು.

10) ಈ ಕೆಲಸಗಳಿಗಾಗಿ ನೇಮಿಸುವ ಸಿಬ್ಬಂದಿಯವರು ಕನಿಷ್ಠ ವಿದ್ಯಾರ್ಹತೆ ಮತ್ತು ಅಗತ್ಯ ಅನುಭವ ಹೊಂದಿರತಕ್ಕದ್ದು.

11) ಯಾಂತ್ರಿಕೃತ ಮತ್ತು ಸ್ವಯಂ ಚಾಲಿತ ಸ್ವಚ್ಛತಾ ಕಾರ್ಯವನ್ನು ನಿರ್ವಹಿಸಲು ಅನುಭವಿ ಮತ್ತು ಕಾರ್ಯಕ್ಷಮತೆಯುಳ್ಳ ಸಿಬ್ಬಂದಿಯನ್ನು ನೇಮಿಸತಕ್ಕದ್ದು. ಸ್ವಚ್ಛತೆಗೆ Eco-friendly ಸ್ವಚ್ಛತಾ ಸಾಮಾಗ್ರಿಗಳನ್ನೇ ಉಪಯೋಗಿಸತಕ್ಕದ್ದು.

12) ಸ್ವಚ್ಛತಾ ಕಾರ್ಯಕ್ಕೆ ನೆಲಗಟ್ಟು ನಿರ್ವಹಣೆ ಯಂತ್ರಗಳು High Pressure Water Jet cleaning machines, Dry Portable Dry Vaccum cleaner, Wet and Dry Vaccum cleaner Pedestrain Sweeperಗಳನ್ನು ಉಪಯೋಗಿಸತಕ್ಕದ್ದು.

## ಭದ್ರತೆ ಕಾರ್ಯಗಳ ನಿಬಂಧನೆಗಳು:

01) ವಿಧಾನ ಮಂಡಲದ ಶಾಸಕರ ಭವನದ ಕಟ್ಟಡಗಳ ಎಲ್ಲಾ ದ್ವಾರಗಳಲ್ಲೂ, ಕಾವೇರಿ ಅತಿಥಿ ಗೃಹದ ಮೊದಲನೇ ಮಹಡಿಯ ಆವರಣ ಹಾಗೂ ವಾಹನಗಳ ಪಾರ್ಕಿಂಗ್ ಸ್ಥಳಗಳಲ್ಲಿ ಆಂತರಿಕ ಭದ್ರತೆಗೆ ಭದ್ರತಾ ಅಧಿಕಾರಿಗಳನ್ನು ನೇಮಿಸುವುದಲ್ಲದೆ ಎಲ್ಲಾ ಮಹಡಿಗಳಲ್ಲಿ ಭದ್ರತಾ ಸಿಬ್ಬಂದಿ ಹಾಜರಿರಬೇಕು ಮತ್ತು ಅಲ್ಲಿರುವ ಸರ್ಕಾರಿ ವಸ್ತುಗಳ ಸಂಪೂರ್ಣ ಸುರಕ್ಷತೆಯ ಜವಾಬ್ದಾರಿ ಅವರದಾಗಿರುತ್ತದೆ.

02) ಕಛೇರಿ ವೇಳೆಯಲ್ಲಿ ಮತ್ತು ನಂತರ ಎಲ್ಲಾ ಮಹಡಿಗಳಲ್ಲಿ ಭದ್ರತಾ ಸಿಬ್ಬಂದಿ ಹಾಜರಿದ್ದು, ಅಲ್ಲಿ ಓಡಾಡುವ ವ್ಯಕ್ತಿಗಳ ಮೇಲೆ ನಿಗಾ ಇಡುವುದಲ್ಲದೆ ವಿಧಾನ ಮಂಡಲದ ವಸ್ತುಗಳು ಕಳ್ಳತನವಾಗದಂತೆ ಸೂಕ್ತ ಭದ್ರತಾ ವ್ಯವಸ್ಥೆಯನ್ನು ಮಾಡುವುದು. ಬೆಲೆಬಾಳುವ ವಸ್ತುಗಳು ಕಳ್ಳತನವಾದರೆ ಗುತ್ತಿಗೆ ಪಡೆಯುವ ಸಂಸ್ಥೆಯನ್ನು ಜವಾಬ್ದಾರಿ ಮಾಡಲಾಗುವುದು.

03) ಶಾಸಕರ ಭವನದ ಕಟ್ಟಡಗಳ ಕೆಳ ಮಹಡಿಗಳನ್ನು ವಾಹನ ನಿಲುಗಡೆಗಾಗಿ ಕಾಯ್ದಿರಿಸಲಾಗಿದ್ದು, ಆ ಸ್ಥಳದಲ್ಲೂ ಸಹ ಭದ್ರತಾ ಸಿಬ್ಬಂಧಿಯನ್ನು ನೇಮಿಸಿ ಶಾಸಕರ ಮತ್ತು ಶಾಸಕರ ಭವನದ ವಾಹನಗಳನ್ನು ಮಾತ್ರ ನಿಲುಗಡೆಗೆ ಕ್ರಮ ಕೈಗೊಳ್ಳುವುದು. ಭದ್ರತೆಗಾಗಿ ನೇಮಿಸಲ್ಪಡುವ ಸಿಬ್ಬಂದಿಯು ಅವರ ಕರ್ತವ್ಯಕ್ಕೆ ಅಗತ್ಯವಾದ ಕನಿಷ್ಠ ವಿದ್ಯಾರ್ಹತೆ ಹೊಂದಿರತಕ್ಕದ್ದು.

04) ಭದ್ರತಾ ಕಾರ್ಯವನ್ನು ಮೂರು ಪಾಳಿಗಳಲ್ಲಿ ದಿನದ 24 ಗಂಟೆಯೂ ನಿರ್ವಹಿಸಬೇಕಾಗಿರುವುದರಿಂದ ಈ ಪಾಳಿಗಳಲ್ಲಿ ನೇಮಿಸುವ ಭದ್ರತಾ ಅಧಿಕಾರಿ ಹಾಗೂ ಸಿಬ್ಬಂದಿಗಳ ಸಂಖ್ಯೆಯನ್ನು ನೀಡತಕ್ಕದ್ದು.

## ಯಶಸ್ವಿ ಟೆಂಡರ್‌ದಾರರು/ಗುತ್ತಿಗೆದಾರರು ಈ ಕೆಳಕಂಡ ಷರತ್ತುಗಳನ್ನು ಪಾಲಿಸಲು ಸಿದ್ಧರಿರತಕ್ಕದ್ದು:

01) ಗುತ್ತಿಗೆದಾರರು ನೇಮಿಸುವ ಅಧಿಕಾರಿ/ಸಿಬ್ಬಂದಿಯ ಹಿನ್ನಲೆಯನ್ನು ಸಂಬಂಧಿಸಿದ ಪೋಲೀಸ್ ಠಾಣೆಯಿಂದ ದೃಢೀಕರಿಸಲ್ಪಡತಕ್ಕದ್ದು.

02) ಗುತ್ತಿಗೆಯನ್ನು ಪಡೆದ 30 ದಿನಗಳೊಳಗಾಗಿ ತನ್ನ ಸಿಬ್ಬಂದಿಗೆ ಸಮೂಹ ವಿಮೆಯನ್ನು ಮಾಡಿಸತಕ್ಕದು.

03) ಕಾರ್ಯನಿರ್ವಹಣೆ ವೇಳೆಯಲ್ಲಿ ಗುತ್ತಿಗೆದಾರರ ನೌಕರರು ಯಾವುದೇ ರೀತಿಯ ಅಪಘಾತಕ್ಕೆ ಈಡಾದಲ್ಲಿ ಸಂಬಂಧಪಟ್ಟ ನೌಕರರು/ಅವರ ಕುಟುಂಬಕ್ಕೆ ನಿಯಮಾನುಸಾರ ಪರಿಹಾರ ನೀಡುವುದು ಗುತ್ತಿಗೆದಾರರದೇ ಜವಾಬ್ದಾರಿಯಾಗಿರುತ್ತದೆ.

04) ಗುತ್ತಿಗೆಯನ್ನು ಯಾವುದೇ ಸಮಯದಲ್ಲೂ 30 ದಿವಸಗಳ ನೋಟೀಸ್ ನೀಡುವ ಮೂಲಕ ರದ್ದುಗೊಳಿಸುವ ಅಧಿಕಾರವನ್ನು ಪ್ರಧಾನ ಕಾರ್ಯದರ್ಶಿ, ಕರ್ನಾಟಕ ವಿಧಾನ ಮಂಡಲ ಇವರು ಹೊಂದಿರುತ್ತಾರೆ.

05) ಗುತ್ತಿಗೆದಾರರು ಕಾರ್ಮಿಕ ಇಲಾಖೆ/ಇಎಸ್‌ಐ/ಭವಿಷ್ಯ ನಿಧಿ ಇತ್ಯಾದಿ ಇಲಾಖೆಗಳು ನಿಗದಿಪಡಿಸಿರುವ ಅಗತ್ಯ ನೀತಿ / ನಿಯಮಗಳನ್ನು ಪಾಲಿಸುವ / ಪಾಲಿಸಿರುವುದು ದೃಢೀಕರಿಸತಕ್ಕದ್ದು.

06) ಗುತ್ತಿಗೆದಾರರು ಆದೇಶ ಹೊರಡಿಸಿದ ದಿನಾಂಕದಿಂದ 15 ದಿನಗಳೊಳಗೆ ನಿಗದಿತ ಮೌಲ್ಯದ ಛಾಪಾ ಕಾಗದದಲ್ಲಿ ಕರಾರು ಒಪ್ಪಂದದ ಪತ್ರಕ್ಕೆ ಸಹಿ ಹಾಕಿ ಪ್ರಧಾನ ಕಾರ್ಯದರ್ಶಿ, ಕರ್ನಾಟಕ ವಿಧಾನ ಮಂಡಲ ಇವರಿಗೆ ಸಲ್ಲಿಸತಕ್ಕದ್ದು. ಈ ಅವಧಿಯೊಳಗೆ ಒಪ್ಪಂದ ಪತ್ರವನ್ನು ಸಲ್ಲಿಸಲು ವಿಫಲರಾದಲ್ಲಿ ಅವರು ಸಲ್ಲಿಸಿರುವ ಮುಂಗಡ ಠೇವಣಿ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

07) ಗುತ್ತಿಗೆದಾರರು ನೇಮಿಸುವ ಅಧಿಕಾರಿ, ಸ್ವಚ್ಛತಾ ಸಿಬ್ಬಂದಿ ಹಾಗೂ ಭದ್ರತಾ ಸಿಬ್ಬಂದಿಗಳನ್ನು ನಿವಾಸದ ವಿಳಾಸ, ದೂರವಾಣಿ ಸಂಖ್ಯೆ ಹಾಗೂ ಅವರ ಭಾವ ಚಿತ್ರಗಳೊಂದಿಗೆ ವಿವರಗಳನ್ನು ಪ್ರಧಾನ ಕಾರ್ಯದರ್ಶಿಗಳು, ಕರ್ನಾಟಕ ವಿಧಾನ ಮಂಡಲ ಇವರಿಗೆ ತ್ರಿಪ್ರತಿಯಲ್ಲಿ ನೀಡತಕ್ಕದ್ದು, ಹಾಗೂ ವಿಳಾಸ ದೃಢೀಕರಣ ದಾಖಲೆ ಒದಗಿಸತಕ್ಕದ್ದು.

08) ವಿವಿಧ ಸೇವೆಗಳಿಗೆ ನೇಮಿಸಲ್ಪಡುವ ನೌಕರರನ್ನು ಆಗಿಂದಾಗ್ಗೆ ಬದಲಾಯಿಸಕೂಡದು.

09) ಗುತ್ತಿಗೆಯನ್ನು ಪಡೆಯುವ ಸಂಸ್ಥೆಯು ವಿವಿಧ ಕೆಲಸಗಳನ್ನು ನಿರ್ವಹಿಸುವ ತಮ್ಮ ನೌಕರರಿಗೆ ಅವರವರ ಕೆಲಸದನುಸಾರ ಸಮವಸ್ತ್ರವನ್ನು ನೀಡತಕ್ಕದ್ದು, ಮತ್ತು ನೌಕರರ ಹೆಸರು, ನಿರ್ವಹಿಸುವ ಕೆಲಸ ಇವೇ ಮುಂತಾದ ವಿವರಗಳನ್ನು ಒಳಗೊಂಡ ಗುರುತಿನ ಚೀಟಿಯನ್ನು ಅವರಿಗೆ ನೀಡಿ, ಕರ್ತವ್ಯದ ವೇಳೆಯಲ್ಲಿ ಅದನ್ನು ಕಡ್ಡಾಯವಾಗಿ ಪ್ರದರ್ಶಿಸಲು ಸೂಚಿಸತಕ್ಕದ್ದು.

10) ಅನುಬಂಧದಲ್ಲಿ ನಮೂದಿಸಿರುವ ವಿಸ್ತೀರ್ಣಕ್ಕನುಗುಣವಾಗಿ ಸಿಬ್ಬಂದಿಯ ಅಗತ್ಯತೆ ಅವಶ್ಯಕತೆ ಇರುತ್ತದೆ. ಒಂದು ವೇಳೆ ಅನುಬಂಧದಲ್ಲಿರುವ ಪೂರ್ಣ ಪ್ರಮಾಣದ ವಿಸ್ತೀರ್ಣದ ಅಗತ್ಯತೆ ಇರದಿದ್ದಲ್ಲಿ ಗುತ್ತಿಗೆದಾರರು ಸೂಚಿಸಿರುವ ಒಟ್ಟು ಸಿಬ್ಬಂದಿಯ ಅಗತ್ಯತೆ ಇರುವುದಿಲ್ಲ. ಇಂತಹ ಸಂದರ್ಭದಲ್ಲಿ ಗುತ್ತಿಗೆ ಹಣವನ್ನು ಅಗತ್ಯವಿರುವ ಸಿಬ್ಬಂದಿಗನುಗುಣವಾಗಿ ಕಡಿತಗೊಳಿಸಲಾಗುವುದು. ಅನಿವಾರ್ಯ ಕಾರಣಗಳಿಗಾಗಿ, ಟೆಂಡರ್ ಅನುಮೋದನಾ ಪ್ರಾಧಿಕಾರವು ಸೂಚಿಸಿದಲ್ಲಿ ಟೆಂಡರ್ ಅವಧಿ ಮುಗಿದ ನಂತರ ಮುಂದಿನ ಮೂರು ತಿಂಗಳು ಹಾಲಿ ಟೆಂಡರ್‌ನ್ನು ನಮೂದಿಸಿದ ದರದಲ್ಲೇ ಸ್ವಚ್ಛತೆ ಹಾಗೂ ಭದ್ರತೆ ಕಾರ್ಯವನ್ನು ನಿರ್ವಹಿಸಲು ಟೆಂಡರ್‌ದಾರರು ಸಿದ್ಧರಿರಬೇಕು.

11) ಶಾಸಕರ ಭವನದ ಎಲ್ಲಾ ಕಟ್ಟಡಗಳು ಶಾಸಕರ ಭವನದ ಮುಂಭಾಗದ ಆವರಣದಲ್ಲಿರುವ ಸಾರ್ವಜನಿಕ ಶೌಚಾಲಯ ಹಾಗೂ ವಿಧಾನ ಮಂಡಲದ ವ್ಯಾಪ್ತಿಗೆ ಬರುವ ಕಾವೇರಿ ಅತಿಥಿ ಗೃಹದ ಮೊದಲನೇ ಮಹಡಿಯಲ್ಲಿರುವ ಕೊಠಡಿಗಳನ್ನು ವೀಕ್ಷಿಸಲಿಚ್ಛಿಸುವವರು ಹಾಗೂ ಹೆಚ್ಚಿನ ಮಾಹಿತಿಯನ್ನು ಪಡೆಯಲಿಚ್ಛಿಸುವವರು ಶಾಸಕರ ಭವನದಲ್ಲಿರುವ ಕ್ಷೇತ್ರಾಧಿಕಾರಿ/ಸಹಾಯಕ ಕ್ಷೇತ್ರಾಧಿಕಾರಿಯವರನ್ನು ಕಛೇರಿಯ ಕೆಲಸದ ವೇಳೆಯಲ್ಲಿ ಸಂಪರ್ಕಿಸಿ ಮಾಹಿತಿಯನ್ನು ಪಡೆಯಬಹುದು.

**ಡಿ.ವಿ.ಪ್ರಭು**
ಕ್ಷೇತ್ರಾಧಿಕಾರಿ,
ಶಾಸಕರ ಭವನ,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ದೂರವಾಣಿ: 080-22359570/22359559.

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಶನಿವಾರ, ಮೇ ೨೧, ೨೦೧೧ (ವೈಶಾಖ ೩೧, ಶಕ ವರ್ಷ ೧೯೩೩) | ನಂ. ೫೨೬ |
|---|---|---|

## ಕರ್ನಾಟಕ ಸರ್ಕಾರದ ನಡವಳಿಗಳು

## ಒಳಾಡಳಿತ ಸಚಿವಾಲಯ

**ವಿಷಯ :** ಪೊಲೀಸ್ ಇಲಾಖೆಯಲ್ಲಿ ಪೊಲೀಸ್ ಅಧಿಕಾರಿ / ನೌಕರರ ವರ್ಗಾವಣೆಗಳ ಬಗ್ಗೆ ಮಾರ್ಗಸೂಚಿಗಳು.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಒಇ 60 ಪೊಸಇ 2009, ದಿನಾಂಕ 24-08-2009.

2) ಸರ್ಕಾರದ ಆದೇಶ ಸಂಖ್ಯೆ: ಒಇ 60 ಪೊಸಇ 2009 (ಭಾ-2), ದಿನಾಂಕ 13-01-2011.

3) ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 4 ಎಸ್‌ಟಿಆರ್ 2001, ದಿನಾಂಕ 22-11-2001.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಪೊಲೀಸ್ ಸಿಬ್ಬಂದಿ ಮಂಡಳಿಯನ್ನು ರಚಿಸಲಾಗಿದ್ದು, ಮೇಲೆ (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಮಂಡಳಿಯ ಪ್ರಕಾರ್ಯಗಳಿಗೆ ಸೇರ್ಪಡೆ ಆದೇಶವನ್ನು ಹೊರಡಿಸಿದ್ದು, ಈ ಕೆಳಕಂಡ ಪ್ರಕಾರ್ಯಗಳನ್ನು (functions) ಅನ್ನು ನಿಗಧಿಪಡಿಸಲಾಗಿದೆ.

ಎ) ಇದು, ಉಪ ಪೊಲೀಸ್ ಆಯುಕ್ತರ ದರ್ಜೆಯ ಅಧಿಕಾರಿಗಳು ಮತ್ತು ಅದಕ್ಕಿಂತ ಕೆಳಗಿನ ದರ್ಜೆಯ ಅಧಿಕಾರಿಗಳ ವರ್ಗಾವಣೆಗಳು, ಸ್ಥಳನಿಯುಕ್ತಿಗಳು, ಮುಂಬಡ್ತಿಗಳು ಮತ್ತು ಇತರ ಸೇವಾ ಸಂಬಂಧಿ ವಿಷಯಗಳನ್ನು ಕುರಿತು ನಿರ್ಣಯಿಸತಕ್ಕದ್ದು.

ಬಿ) ಇದು, ಹೆಚ್ಚುವರಿ ಪೊಲೀಸ್ ಅಧೀಕ್ಷಕರೂ ಒಳಗೊಂಡಂತೆ ಪೊಲೀಸ್ ಅಧೀಕ್ಷಕರ ದರ್ಜೆಯ ಅಧಿಕಾರಿಗಳು ಮತ್ತು ಅವರಿಗಿಂತ ಮೇಲಿನ ದರ್ಜೆಯ ಅಧಿಕಾರಿಗಳ ಸ್ಥಳನಿಯುಕ್ತಿಗಳು ಮತ್ತು ವರ್ಗಾವಣೆಗಳಿಗೆ ಸಂಬಂಧಿಸಿದಂತೆ ಸರ್ಕಾರಕ್ಕೆ ಸೂಕ್ತ ಶಿಫಾರಸುಗಳನ್ನು ಮಾಡುವುದು.

ಸಿ) ಇದು ಪೊಲೀಸ್ ಅಧೀಕ್ಷಕರು ಮತ್ತು ಅವರಿಗಿಂತ ಮೇಲಿನ ದರ್ಜೆಯ ಅಧಿಕಾರಿಗಳು ಮುಂಬಡ್ತಿ, ವರ್ಗಾವಣೆ ಅಥವಾ ಕಾನೂನು ಬಾಹಿರ ಅಥವಾ ಅಕ್ರಮ ಆದೇಶಗಳಿಂದ ತಮಗೆ ತೊಂದರೆಗಳಾಗಿರುವ ಬಗ್ಗೆ ಸಲ್ಲಿಸುವ ಮನವಿಗಳನ್ನು ಪರಿಗಣಿಸತಕ್ಕದ್ದು.

ಡಿ) ಸಾಮಾನ್ಯವಾಗಿ ರಾಜ್ಯದಲ್ಲಿನ ಪೊಲೀಸ್ ಕಾರ್ಯನಿರ್ವಹಣೆಯನ್ನು ವಿಮರ್ಶಿಸುವುದು.

3. ಮಂಡಳಿಯ ನಿಯಂತ್ರಣ ಮತ್ತು ನಿರ್ದೇಶನಗಳಿಗೆ ಒಳಪಟ್ಟು ಅದು, ಜಿಲ್ಲೆಯ ಪೊಲೀಸ್ ಸೂಪರಿಂಟೆಂಡೆಂಟ್ ಅವರಿಗೆ ಸಿ ಮತ್ತು ಡಿ ಗುಂಪಿನ ನೌಕರರನ್ನು ಜಿಲ್ಲೆಯೊಳಗೆ ಮತ್ತು ವಲಯ ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್‌ಗಳಿಗೆ ವಲಯದೊಳಗೆ ವರ್ಗಾವಣೆ ಮಾಡಲು ಅಧಿಕಾರ ನೀಡಬಹುದು.

4. ಪೊಲೀಸ್ ಠಾಣೆಯ ಪ್ರಭಾರ ಹೊಂದಿರುವ ಠಾಣಾಧಿಕಾರಿ, ಪೊಲೀಸ್ ವೃತ್ತದ ಪ್ರಭಾರಹೊಂದಿರುವ ಸರ್ಕಲ್ ಇನ್ಸ್‌ಪೆಕ್ಟರ್ ಮತ್ತು ಉಪ ವಿಭಾಗದ ಪ್ರಭಾರವನ್ನು ಹೊಂದಿರುವ ಪೊಲೀಸ್ ಉಪವಿಭಾಗಾಧಿಕಾರಿಯು, ಅವನನ್ನು ಅವನ ವಿರುದ್ಧ ಶಿಸ್ತು ವಿಚಾರಣ ಪ್ರಕ್ರಿಯೆ ನಡೆಯುತ್ತಿದ್ದಲ್ಲಿ ಅಥವಾ ಕ್ರಿಮಿನಲ್ ಅಪರಾಧಕ್ಕಾಗಿ ಅಥವಾ ಭ್ರಷ್ಟಾಚಾರದ ಪ್ರಕರಣಕ್ಕಾಗಿ ಅವರ ವಿರುದ್ಧ ದೋಷನಿರ್ಣಯವಾಗಿದ್ದಲ್ಲಿ ಅಥವಾ ಪದಧಾರಿಯು ತನ್ನ ಹೊಣೆಗಾರಿಕೆಗಳನ್ನು ನಿರ್ವಹಿಸುವುದರಿಂದ ಅನ್ಯಥಾ ಅಸಮರ್ಥನಾಗಿರುವುದರ ಕಾರಣದ ಮೇಲೆ ಅವನನ್ನು ಅವಧಿಗೆ ಮುನ್ನ ತೆಗೆದು ಹಾಕುವ ಸನ್ನಿವೇಶಗಳಿದ್ದ ಹೊರತು ಕನಿಷ್ಠ 2 ವರ್ಷಗಳ ಪದಾವಧಿ ಹೊಂದಿರತಕ್ಕದ್ದು. ಈ ಎರಡು ವರ್ಷಗಳ ಪದಾವಧಿ ಅಧಿಕಾರಿಯ ಪದೋನ್ನತಿ ಹಾಗೂ ನಿವೃತ್ತಿಗೆ ಒಳಪಟ್ಟಿರುತ್ತದೆ.

5. ಸರ್ಕಾರ, ವಿಶೇಷ ಪ್ರಕರಣಗಳಲ್ಲಿ ಕಾರಣಗಳನ್ನು ದಾಖಲಿಸಿದ ತರುವಾಯ ಮಾತ್ರವೇ ಮಂಡಳಿಯ ನಿರ್ಣಯವನ್ನು ಮಾರ್ಪಾಡು ಮಾಡಬಹುದು. ಹೆಚ್ಚುವರಿ ಪೊಲೀಸ್ ಅಧೀಕ್ಷಕರೂ ಸೇರಿದಂತೆ ಪೊಲೀಸ್ ಅಧೀಕ್ಷಕರ ದರ್ಜೆಯ ಅಧಿಕಾರಿಗಳು ಮತ್ತು ಅದಕ್ಕಿಂತ ಮೇಲಿನ ದರ್ಜೆಯ ಅಧಿಕಾರಿಗಳ ಸ್ಥಳನಿಯುಕ್ತಿಗಳು ಮತ್ತು ವರ್ಗಾವಣೆಗಳಿಗೆ ಸಂಬಂಧಿಸಿದಂತೆ ಮಂಡಳಿ ಮಾಡುವ ಶಿಫಾರಸುಗಳಿಗೆ ಸರ್ಕಾರವು ಯುಕ್ತ ಮಾನ್ಯತೆ ನೀಡತಕ್ಕದ್ದು ಮತ್ತು ಸಾಮಾನ್ಯವಾಗಿ ಅವುಗಳನ್ನು ಒಪ್ಪಿಕೊಳ್ಳತಕ್ಕದ್ದು. ಈ ಪ್ರಕರಣಗಳನ್ನು ಶಿಫಾರಸ್ಸು ಮಾಡುವಾಗ ಮಂಡಳಿಯು ಕಾರ್ಯಾಚರಣೆಯ ಕರ್ತವ್ಯದಲ್ಲಿರುವ ಪೊಲೀಸ್ ಅಧಿಕಾರಿಗಳಿಗೆ ಕನಿಷ್ಠ 2 ವರ್ಷಗಳ ಪದಾವಧಿಯನ್ನು ನೀಡಬೇಕೆಂದು ಸರ್ವೋಚ್ಚ ನ್ಯಾಯಾಲಯದ ನಿರ್ದೇಶನಗಳನ್ನು ಗಮನದಲ್ಲಿಟ್ಟುಕೊಳ್ಳತಕ್ಕದ್ದು.

6. ಪೊಲೀಸ್ ಸಿಬ್ಬಂದಿ ಮಂಡಳಿಯು ತೀರ್ಮಾನಿಸುವ ಮತ್ತು ಜಾರಿಗೊಳಿಸುವ ವರ್ಗಾವಣೆಗಳು ಸರ್ಕಾರವು ಕಾಲಕಾಲಕ್ಕೆ ಹೊರಡಿಸುವ ಸಾಮಾನ್ಯ ವರ್ಗಾವಣೆಗಳ ಮಾರ್ಗಸೂಚಿಗಳನ್ವಯ ಕಡ್ಡಾಯವಾಗಿ ಇರತಕ್ಕದ್ದು.

7. ಪೊಲೀಸ್ ಸಿಬ್ಬಂದಿ ಮಂಡಳಿಯ ಸಭೆಯ ನಡವಳಿಗಳ ಮತ್ತು ಅದರನ್ವಯ ಹೊರಡಿಸಿದ ವರ್ಗಾವಣೆ ಆದೇಶಗಳ ಪ್ರತಿಗಳನ್ನು ತತ್‌ಕ್ಷಣವೇ ಸರ್ಕಾರಕ್ಕೆ ಕಳುಹಿಸತಕ್ಕದ್ದು.

ಮೇಲೆ (3) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಡಳಿತ ಸುಧಾರಣಾ ಆಯೋಗದ ಶಿಫಾರಸ್ಸುಗಳನ್ನು ಗಮನದಲ್ಲಿಟ್ಟುಕೊಂಡು ಸರ್ಕಾರಿ ನೌಕರರ ವರ್ಗಾವಣೆಗಳ ಬಗ್ಗೆ ಅಧಿಕೃತ ಜ್ಞಾಪನ ಸಂಖ್ಯೆ: ಡಿಪಿಎಆರ್ 5 ಎಸ್‌ಟಿಆರ್ 95 ದಿನಾಂಕ 28–04–1995 ಮತ್ತು ತದನಂತರ ಕಾಲಕಾಲಕ್ಕೆ ಹೊರಡಿಸಿದ ಮಾರ್ಪಡಿಸಿದ ಆದೇಶಗಳನ್ನು ಗಮನದಲ್ಲಿರಿಸಿಕೊಂಡು ಸರ್ಕಾರವು ಮಾರ್ಗಸೂಚಿಯನ್ನು ಹೊರಡಿಸಿದೆ.

ಡಿವೈ.ಎಸ್.ಪಿ. ವೃಂದದ ಅಧಿಕಾರಿಗಳವರೆಗಿನ ಪೊಲೀಸ್ ಸಿಬ್ಬಂದಿಗಳ ವರ್ಗಾವಣೆಯನ್ನು ಮೇಲೆ (1) ರಲ್ಲಿ ಓದಲಾದ ಆದೇಶದನ್ವಯ ಪೊಲೀಸ್ ಸಿಬ್ಬಂದಿ ಮಂಡಳಿಯು ಪರಿಗಣಿಸುತ್ತಿದ್ದು, ಸರ್ಕಾರವು ಕಾಲಕಾಲಕ್ಕೆ ಹೊರಡಿಸುತ್ತಿರುವ ಸರ್ಕಾರಿ ನೌಕರರ ಸಾಮಾನ್ಯ ವರ್ಗಾವಣೆ ಮಾರ್ಗಸೂಚಿಗಳ ಅನುಸಾರ ಪೊಲೀಸ್ ಇಲಾಖೆಗೆ ಸಂಬಂಧಿಸಿದಂತೆ ಪ್ರತ್ಯೇಕವಾದ ಮಾರ್ಗಸೂಚಿಗಳನ್ನು ಹೊರಡಿಸುವುದು ಅವಶ್ಯಕವೆಂದು ಸರ್ಕಾರವು ಪರಿಗಣಿಸಿದೆ. ವರ್ಗಾವಣೆ ಮಾರ್ಗಸೂಚಿಗಳನ್ವಯ ಪೊಲೀಸ್ ಸಿಬ್ಬಂದಿ ಮಂಡಳಿಯು ವರ್ಗಾವಣೆಗಳನ್ನು ಪರಿಗಣಿಸಬೇಕಾಗಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಒಇ 60 ಪೊಸಇ 2009 (ಭಾ–2) ಬೆಂಗಳೂರು, ದಿನಾಂಕ 21–05–2011**

1. ಪೊಲೀಸ್ ಅಧಿಕಾರಿ ಮತ್ತು ಪೊಲೀಸ್ ಸಿಬ್ಬಂದಿಗಳ ವರ್ಗಾವಣೆಗಳ ಮಾರ್ಗಸೂಚಿಗಳು ತಕ್ಷಣದಿಂದ ಜಾರಿಗೆ ಬರುತ್ತದೆ.

2. **"ವರ್ಗಾವಣೆ"** ಎಂದರೆ ಒಂದು ಕೇಂದ್ರಸ್ಥಾನದಿಂದ ಮತ್ತೊಂದು ಕೇಂದ್ರಸ್ಥಾನಕ್ಕೆ ಅಥವಾ ಒಂದೇ ಕೇಂದ್ರಸ್ಥಾನದಲ್ಲಿ ಒಂದು ಕಛೇರಿಯಿಂದ ಮತ್ತೊಂದು ಕಛೇರಿಗೆ ಮಾಡುವ ನೇಮಕಾತಿಯು ಸಹ ಒಳಗೊಂಡಿರುತ್ತದೆ.

**ಟಿಪ್ಪಣಿ :** ಆದರೆ ಒಂದೇ ಕಛೇರಿ / ಯೂನಿಟ್ ನಲ್ಲಿ ಒಂದು ಹುದ್ದೆಯಿಂದ ಮತ್ತೊಂದಕ್ಕೆ ಅಥವಾ ಒಂದು ಡೆಸ್ಕ್ ನಿಂದ ಮತ್ತೊಂದು ಡೆಸ್ಕ್ ಗೆ ಮಾಡುವ ಬದಲಾವಣೆಗಳನ್ನು ವರ್ಗಾವಣೆಗಳೆಂದು ಪರಿಗಣಿಸಬಾರದು.

3. **ಅವಧಿಪೂರ್ವ ವರ್ಗಾವಣೆ :**

'ಅವಧಿಪೂರ್ವ ವರ್ಗಾವಣೆ' ಎಂದರೆ ಕಂಡಿಕೆ–4 ರಲ್ಲಿರುವ ಒಂದೇ ಸ್ಥಳದಲ್ಲಿ ಕನಿಷ್ಠ ಪದಾವಧಿಯ ಮತ್ತು ಗರಿಷ್ಠ ಪದಾವಧಿಯ ಒಳಗಡೆ ಮಾಡುವ ವರ್ಗಾವಣೆಗಳು.

4. ಪ್ರತಿ ವೃಂದದಲ್ಲಿ ಒಂದು ಸ್ಥಳದಲ್ಲಿ ಕನಿಷ್ಠ ಮತ್ತು ಗರಿಷ್ಠ ಪದಾವಧಿ ಕೆಳಕಂಡಂತೆ ಇರತಕ್ಕದ್ದು.

| ಕ್ರ ಸಂ. | ಹುದ್ದೆ / ವೃಂದ | ಕನಿಷ್ಠ ಪದಾವಧಿ ವರ್ಷಗಳಲ್ಲಿ | ಗರಿಷ್ಠ ಪದಾವಧಿ ವರ್ಷಗಳಲ್ಲಿ |
|---|---|---|---|
| 1. | ಸಿವಿಲ್ ಪೊಲೀಸ್ ಕಾನ್ಸ್‌ಟೇಬಲ್ / ಹೆಡ್ ಕಾನ್ಸ್‌ಟೇಬಲ್ ಮತ್ತು ಸಮಾನಾಂತರ ಹುದ್ದೆಗಳು (ಸಶಸ್ತ್ರ/ ನಿಸ್ತಂತು / ಎಫ್.ಪಿ.ಬಿ) | 5 | 7 |
| 2. | ಎ.ಎಸ್.ಐ. (ಸಿವಿಲ್) ಮತ್ತು ಸಮಾನಾಂತರ ಹುದ್ದೆಗಳು | 5 | 7 |
| 3. | ಪಿ.ಎಸ್.ಐ. (ಸಿವಿಲ್) ಮತ್ತು ಸಮಾನಾಂತರ ಹುದ್ದೆಗಳು | 2 | 3 |
| 4. | ಪಿ.ಐ. (ಸಿವಿಲ್) ಮತ್ತು ಸಮಾನಾಂತರ ಹುದ್ದೆಗಳು | 2 | 3 |
| 5. | ಡಿವೈ.ಎಸ್.ಪಿ. (ಸಿವಿಲ್) ಮತ್ತು ಸಮಾನಾಂತರ ಹುದ್ದೆಗಳು | 2 | 3 |
| 6. | ಎಸ್.ಪಿ. (ಸಿವಿಲ್) (ನಾನ್ ಐಪಿಎಸ್) ಮತ್ತು ಸಮಾನಾಂತರ ಹುದ್ದೆಗಳು | 2 | 2 |

5. ಮಂಡಳಿಯ ನಿಯಂತ್ರಣ ಮತ್ತು ನಿರ್ದೇಶನಗಳಿಗೆ ಒಳಪಟ್ಟು ಅದು, ಜಿಲ್ಲೆಯ ಪೊಲೀಸ್ ಸೂಪರಿಂಟೆಂಡೆಂಟ್ ಅವರಿಗೆ ಸಬ್–ಇನ್ಸ್‌ಪೆಕ್ಟರ್ ಹುದ್ದೆಯವರೆಗಿನ ನೌಕರರನ್ನು ಜಿಲ್ಲೆಯೊಳಗೆ ಮತ್ತು ಸಬ್–ಇನ್ಸ್‌ಪೆಕ್ಟರ್ ಮತ್ತು ಇನ್ಸ್‌ಪೆಕ್ಟರ್ ವೃಂದದ ಅಧಿಕಾರಿಗಳನ್ನು ವಲಯ ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್‌ಗಳಿಗೆ ವಲಯದೊಳಗೆ ವರ್ಗಾವಣೆ ಮಾಡಲು ಅಧಿಕಾರ ನೀಡಬಹುದು.

6. ಕೆ.ಎಸ್.ಆರ್.ಪಿ. ವೃಂದದ ಅಧಿಕಾರಿಗಳಿಗೆ ಸಂಬಂಧಪಟ್ಟಂತೆ ಈ ವರ್ಗಾವಣೆ ಮಾರ್ಗಸೂಚಿಯಲ್ಲಿರುವ ಎಲ್ಲಾ ನಿಬಂಧನೆಗಳಿಗೆ ಒಳಪಟ್ಟು ಸ್ಪೆಷಲ್ ರಿಸರ್ವ್ ಪೊಲೀಸ್ ಇನ್ಸ್‌ಪೆಕ್ಟರ್ ರವರೆಗಿನ ಅಧಿಕಾರಿಗಳ ವರ್ಗಾವಣೆಗಳನ್ನು ಎ.ಡಿ.ಜಿ.ಪಿ. ಕೆ.ಎಸ್.ಆರ್.ಪಿ. ರವರ ಅಧ್ಯಕ್ಷತೆಯಲ್ಲಿ ರಚಿಸಿರುವ ಸಮಿತಿಯು ನಿಯಮಾನುಸಾರ ಮಾಡತಕ್ಕದ್ದು. ಸಹಾಯಕ ಕಮಾಂಡೆಂಟ್ ವೃಂದದವರೆಗಿನ ಅಧಿಕಾರಿಗಳನ್ನು ಪೊಲೀಸ್ ಸಿಬ್ಬಂದಿ ಮಂಡಳಿಯು ಪರಿಗಣಿಸತಕ್ಕದ್ದು. ಡೆಪ್ಯೂಟಿ ಕಮಾಂಡೆಂಟ್ / ಅಡಿಷನಲ್ ಕಮಾಂಡೆಂಟ್ / ಕಮಾಂಡೆಂಟ್ ವೃಂದದ ಅಧಿಕಾರಿಗಳ ವರ್ಗಾವಣೆಗಳ ಬಗ್ಗೆ ಸರ್ಕಾರಕ್ಕೆ ಸೂಕ್ತ ಪ್ರಸ್ತಾವನೆಯನ್ನು ಪೊಲೀಸ್ ಸಿಬ್ಬಂದಿ ಮಂಡಳಿಯು ಪರಿಶೀಲಿಸಿ ಸಲ್ಲಿಸತಕ್ಕದ್ದು.

7. ಯಾವುದೇ ಸಾಲಿನ ವರ್ಗಾವಣೆಗಳು ಪ್ರತಿ ವೃಂದದ, ವೃಂದ ಬಲದ ಶೇಕಡ 20 ರಷ್ಟನ್ನು ಮೀರತಕ್ಕದ್ದಲ್ಲ.

8. ನಿಯಮಾನುಸಾರ ಸರ್ಕಾರವು ಯಾವುದೇ ವರ್ಗಾವಣೆಗಳ ಬಗ್ಗೆ ನಿರ್ದೇಶನ ನೀಡಿದಲ್ಲಿ, ಅದನ್ನು ಜಾರಿಗೊಳಿಸಿ ಸರ್ಕಾರಕ್ಕೆ ವರದಿ ಮಾಡತಕ್ಕದ್ದು.

9. ಸಾಧ್ಯವಾದಷ್ಟು ಮಟ್ಟಿಗೆ ಎರಡು ವರ್ಷದ ಒಳಗೆ ವಯೋನಿವೃತ್ತಿ ಹೊಂದುತ್ತಿರುವ ಅಧಿಕಾರಿ / ಸಿಬ್ಬಂದಿಯನ್ನು ಅವರು ಕೋರಿದ ಸ್ಥಳಕ್ಕೆ ಅಥವಾ ಅದರ ಹತ್ತಿರದ ಸ್ಥಳಕ್ಕೆ ವರ್ಗಾವಣೆ ಮಾಡಲು ಪರಿಗಣಿಸಬಹುದು.

10. ಕಾರ್ಯಕಾರಿ (Executive) ಹುದ್ದೆಗಳಲ್ಲಿ 5 ವರ್ಷಗಳ ಸೇವೆಗಳನ್ನು ಸಲ್ಲಿಸಿದ ಪೊಲೀಸ್ ಅಧಿಕಾರಿ / ಸಿಬ್ಬಂದಿಗಳಿಗೆ ಕನಿಷ್ಠ 2 ವರ್ಷಗಳ ಅವಧಿಗೆ ಕಾರ್ಯಕಾರಿಯಲ್ಲದ (Non-executive) ಹುದ್ದೆಗಳಿಗೆ ಸ್ಥಳನಿಯುಕ್ತಿಗೊಳಿಸತಕ್ಕದ್ದು.

11. ಮುಂದುವರೆದು, ಈ ಕೆಳಕಂಡ ಪ್ರಕರಣಗಳಲ್ಲಿ ವರ್ಗಾವಣೆಗಳನ್ನು ಜಾರಿಗೊಳಿಸಬಹುದಾಗಿದೆ.

1) ಖಾಲಿ ಇರುವ, ಆಡಳಿತಾತ್ಮಕ ಹಿತದೃಷ್ಟಿಯಿಂದ, ಅತ್ಯಾವಶ್ಯಕವಾಗಿ ತುಂಬಬೇಕಾದ ಹುದ್ದೆಗಳ ಪ್ರಕರಣಗಳು.

2) ಪತಿ–ಪತ್ನಿ ಪ್ರಕರಣಗಳು.

3) ಪರಸ್ಪರ ವರ್ಗಾವಣೆಗಳು – ಸಂಬಂಧಿಸಿದ ಸಿಬ್ಬಂದಿಯ ಒಪ್ಪಿಗೆ ಪತ್ರದೊಂದಿಗೆ.

4) ತೀವ್ರತರವಾದ ಖಾಯಿಲೆಯಿಂದ ಬಳಲುತ್ತಿರುವ ನೌಕರರ / ನೌಕರರ ಅವಲಂಬಿತರ / ತಂದೆ ತಾಯಿಯವರ ವೈದ್ಯಕೀಯ ಚಿಕಿತ್ಸೆ / ಆರೋಗ್ಯದ ಹಿತದೃಷ್ಟಿಯಿಂದ ಈ ಬಗ್ಗೆ ಪಡೆಯುತ್ತಿರುವ ವೈದ್ಯಕೀಯ ಚಿಕಿತ್ಸೆಯ ಬಗ್ಗೆ ಖಚಿತಪಡಿಸಿಕೊಂಡು ಪರಿಗಣಿಸಬೇಕಾದ ವರ್ಗಾವಣೆಗಳು.

5) ಸಾರ್ವಜನಿಕ ದೂರಿನ ಮೇರೆಗೆ ಇಲಾಖಾ ವಿಚಾರಣೆಗೊಳಪಟ್ಟ ಪ್ರಕರಣಗಳು.

6) ಮುಂಬಡ್ತಿಯಿಂದ ತುಂಬಬೇಕಾದ ಹುದ್ದೆಗಳು – ಖಾಲಿ ಹುದ್ದೆಗಳಿಗೆ ಮಾತ್ರ.

7) ಎರಡು ವರ್ಷಗಳಲ್ಲಿ ನಿವೃತ್ತಿ ಹೊಂದಲಿರುವ ಸಿಬ್ಬಂದಿಯ ಕೋರಿಕೆಗಳು.

8) ಆಡಳಿತಾತ್ಮಕ ದೃಷ್ಟಿಯಿಂದ ಅವಶ್ಯವಿರುವ ವರ್ಗಾವಣೆಗಳು.

12. ಪೊಲೀಸ್ ಅಧಿಕಾರಿ / ಸಿಬ್ಬಂದಿಗಳನ್ನು ದೂರುಗಳ ಮೇಲೆ ಮಾಡುವ ವರ್ಗಾವಣೆಗಳ ಪ್ರಕರಣಗಳನ್ನು ಪೊಲೀಸ್ ಸಿಬ್ಬಂದಿ ಮಂಡಳಿಯು ಪರಿಗಣಿಸಿ ಈ ಬಗ್ಗೆ ತೆಗೆದುಕೊಂಡ ಕ್ರಮವನ್ನು ಸರ್ಕಾರಕ್ಕೆ ವರದಿ ಮಾಡುವುದು.

13. ಈ ಕೆಳಕಂಡ ಪ್ರಕರಣಗಳಲ್ಲಿ ಈ ವರ್ಗಾವಣೆಯ ಮಾರ್ಗಸೂಚಿಗಳು ಅನ್ವಯವಾಗುವುದಿಲ್ಲ.

1) ನೇರ ನೇಮಕಾತಿ ಹೊಂದಿದ ಅಧಿಕಾರಿ / ನೌಕರರನ್ನು ಖಾಲಿ ಹುದ್ದೆಗೆ ನೇಮಿಸುವ ಪ್ರಕರಣಗಳು.

2) ಪರೀಕ್ಷಾರ್ಥ ಅವಧಿಯೊಂದಿಗೆ ನೇರ ನೇಮಕಾತಿ ಹೊಂದಿದ ಅಧಿಕಾರಿ / ನೌಕರರಿಗೆ ತರಬೇತಿಗೆ ನಿಯೋಜನೆ.

3) ಯಾವುದೇ ಅಧಿಕಾರಿ / ಸಿಬ್ಬಂದಿಯನ್ನು ಮುಂಬಡ್ತಿಯ ನಂತರ ಖಾಲಿ ಹುದ್ದೆಗಳಿಗೆ ನೇಮಿಸುವ ಪ್ರಸ್ತಾವನೆಗಳು.

4) 180 ದಿವಸಗಳಿಗಿಂತ ಹೆಚ್ಚಿನ ಅವಧಿಯ ರಜೆಯ ಮೇಲೆ ತೆರಳಿದ ಅಧಿಕಾರಿ / ನೌಕರರ ಸ್ಥಾನದಲ್ಲಿ ಬೇರೆಯವರನ್ನು ನೇಮಿಸಿದಲ್ಲಿ ರಜೆಯಿಂದ ಹಿಂದಿರುಗಿದ ಅಧಿಕಾರಿ / ನೌಕರರಿಗೆ ಖಾಲಿ ಸ್ಥಳಗಳಿಗೆ ನೇಮಿಸುವ ಪ್ರಸ್ತಾವನೆ.

5) ಇಲಾಖಾ ವಿಚಾರಣೆ ಅಥವಾ ಕ್ರಿಮಿನಲ್ ಮೊಕದ್ದಮೆ ಎದುರಿಸುತ್ತಿರುವ ನೌಕರರಿಗೆ ಅಮಾನತ್ತುಗೊಳಿಸುವ ಬದಲು ಬೇರೆ ಸ್ಥಾನಕ್ಕೆ ವರ್ಗಾಯಿಸುವ ಬಗ್ಗೆ ನೇಮಕಾತಿ ಪ್ರಾಧಿಕಾರವು ನಿರ್ಣಯಿಸಿದಲ್ಲಿ ಅಂತಹ ವರ್ಗಾವಣೆಗಳು.

6) ಮುಂಬಡ್ತಿ, ವಯೋ ನಿವೃತ್ತಿ, ನಿಧನ, ರಾಜೀನಾಮೆ, ಸೇವೆಯಿಂದ ವಜಾಗೊಳಿಸುವುದು, ತೆಗೆದುಹಾಕುವುದು, ಕಡ್ಡಾಯ ನಿವೃತ್ತಿ ಅಥವಾ ಇತರ ಸಂದರ್ಭಗಳಲ್ಲಿ ಈ ಹುದ್ದೆಗಳನ್ನು ತುಂಬುವ ಪ್ರಸ್ತಾವನೆಗಳು.

7) ಹೊಸ ಕಛೇರಿಯನ್ನು ಪ್ರಾರಂಭಿಸಿದಾಗ ಅಲ್ಲಿನ ಖಾಲಿ ಹುದ್ದೆಗಳನ್ನು ತುಂಬುವ ಪ್ರಸ್ತಾವನೆಗಳು.

8) ರಾಜ್ಯ ಚುನಾವಣಾ ಆಯೋಗ ಅಥವಾ ಕೇಂದ್ರ ಚುನಾವಣಾ ಆಯೋಗದ ಸೂಚನೆಯ ಮೇರೆಗೆ ವರ್ಗಾವಣೆ ಮಾಡುವ ನೌಕರರ ಪ್ರಸ್ತಾವನೆಗಳು.

14. ಪೊಲೀಸ್ ಸಿಬ್ಬಂದಿ ಮಂಡಳಿಯು ಯಾವುದೇ ಜಿಲ್ಲೆಗಳಲ್ಲಿ ಖಾಲಿ ಇರುವ ಹುದ್ದೆಗಳು ಅತಿ ಹೆಚ್ಚು ಅಥವಾ ಅತಿ ಕಡಿಮೆಯಾಗದಂತೆ ಸಮನ್ವಯ ಸಾಧಿಸಲು ಕ್ರಮ ಕೈಗೊಳ್ಳುವುದು.

15. ಕಡ್ಡಾಯ ನಿರೀಕ್ಷಣಾ ಅವಧಿ ಮಂಜೂರಾತಿಯ ಪ್ರಕರಣಗಳಿಗೆ ಆಸ್ಪದ ನೀಡದಂತೆ ಪೊಲೀಸ್ ಸಿಬ್ಬಂದಿ ಮಂಡಳಿಯು ಪೊಲೀಸ್ ಅಧಿಕಾರಿ / ಸಿಬ್ಬಂದಿಗಳಿಗೆ ಕೂಡಲೇ ಸ್ಥಳ ನೇಮಕಾತಿ ಆದೇಶಗಳನ್ನು ಹೊರಡಿಸುವುದು.

16. ವರ್ಗಾವಣೆಗಳನ್ನು ಜಾರಿಗೊಳಿಸುವ ಬಗ್ಗೆ ಸರ್ಕಾರವು ಪ್ರತಿವರ್ಷ ಹೊರಡಿಸುವ ಸಾಮಾನ್ಯ ವರ್ಗಾವಣೆಯ ಅವಧಿಯನ್ನು ಅಥವಾ ಸಾಮಾನ್ಯ ವರ್ಗಾವಣೆಗೆ ಹೊರಡಿಸುವ ನಿರ್ಬಂಧವನ್ನು ಅನುಸರಿಸಿ ವರ್ಗಾವಣೆಗಳನ್ನು ಮಾಡುವುದು. ಅಂದರೆ, ವರ್ಗಾವಣೆಗಳು, ವರ್ಗಾವಣೆಗಳಿಗೆ ಸಂಬಂಧಿಸಿದಂತೆ ಒಳಾಡಳಿತ ಇಲಾಖೆಯು ಕಾಲಕಾಲಕ್ಕೆ ಹೊರಡಿಸುವ ಮಾರ್ಗಸೂಚಿಗಳ ಅನ್ವಯ ಇರತಕ್ಕದ್ದು.

17. ವರ್ಗಾವಣೆ ನೀತಿಯನ್ವಯ ಅವಧಿ ಮುಗಿದ ನಂತರ ಮೇಲಿನ ಕಂಡಿಕೆ–11 ರಲ್ಲಿ ಕಲ್ಪಿಸಿರುವ ಅವಕಾಶಗಳನ್ವಯ ವರ್ಗಾವಣೆ ಮಾಡುವ ಅನಿವಾರ್ಯ ಸಂದರ್ಭಗಳು ಬಂದೊದಗಿದಲ್ಲಿ ಅಂತಹ ಪ್ರಕರಣಗಳನ್ನು ಪೊಲೀಸ್ ಸಿಬ್ಬಂದಿ ಮಂಡಳಿ ಪರಿಶೀಲಿಸಿ, ಪ್ರತಿ ಪ್ರಕರಣದಲ್ಲಿನ ವರ್ಗಾವಣೆಯು ಯಾವ ರೀತಿಯಲ್ಲಿ ಅನಿವಾರ್ಯವಾಗಿದೆ ಎಂಬುದಕ್ಕೆ ಕಾರಣಗಳನ್ನು ಮಂಡಳಿ ಲಿಖಿತದಲ್ಲಿ ನಮೂದಿಸಿ, ತನ್ನ ಶಿಫಾರಸ್ಸುಗಳನ್ನು ಒಳಾಡಳಿತ ಇಲಾಖೆಗೆ ಕಳುಹಿಸಬೇಕು. ಒಳಾಡಳಿತ ಇಲಾಖೆ ಅಂತಹ ಶಿಫಾರಸ್ಸುಗಳನ್ನು ಪರಿಶೀಲಿಸಿ ಗೃಹ ಸಚಿವರ ಮೂಲಕ ಮುಖ್ಯ ಮಂತ್ರಿಯವರ ಪೂರ್ವಾನುಮೋದನೆಯನ್ನು ಕಡತದಲ್ಲಿ ಪಡೆಯತಕ್ಕದು.

18. ಪೊಲೀಸ್ ಸಿಬ್ಬಂದಿ ಮಂಡಳಿಯ ಸಭೆಯ ನಡವಳಿಗಳ ಮತ್ತು ಅದರನ್ವಯ ಹೊರಡಿಸಿದ ವರ್ಗಾವಣೆ ಆದೇಶಗಳ ಪ್ರತಿಗಳನ್ನು ತತ್‌ಕ್ಷಣವೇ ಸರ್ಕಾರಕ್ಕೆ ಕಳುಹಿಸತಕ್ಕದ್ದು.

19. 2011–12 ನೇ ಸಾಲಿನ ಪೊಲೀಸ್ ಸಿಬ್ಬಂದಿಗಳ (ಲಿಪಿಕ ನೌಕರರನ್ನು ಹೊರತುಪಡಿಸಿ) ಸಾಮಾನ್ಯ ವರ್ಗಾವಣೆಯನ್ನು ಜೂನ್ 15, 2011 ರೊಳಗಾಗಿ ಜಾರಿಗೊಳಿಸತಕ್ಕದ್ದು.

20. ಪೊಲೀಸ್ ಇಲಾಖೆಯ ಲಿಪಿಕ ನೌಕರರ ವರ್ಗಾವಣೆಗಳಿಗೆ ಸಂಬಂಧಿಸಿದಂತೆ ವರ್ಗಾವಣೆ ನೀತಿಯು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಪ್ರತಿ ವರ್ಷ ಹೊರಡಿಸುವ ಸಾಮಾನ್ಯ ವರ್ಗಾವಣೆ ಮಾರ್ಗಸೂಚಿಗಳ ಮತ್ತು ಸಾಮಾನ್ಯ ವರ್ಗಾವಣೆ ಅವಧಿಗಳ ಅನ್ವಯ ಇರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ

ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಸೋಮವಾರ, ಮೇ ೨೩, ೨೦೧೧ (ಜ್ಯೇಷ್ಠ ೨, ಶಕ ವರ್ಷ ೧೯೩೩) | ನಂ. ೫೨೭ |
|---|---|---|

## PARLIAMENTARY AFFAIRS AND LEGISLATION SECRETARIAT

### NOTIFICATION

**No. DPAL 05 SAMVYAVI 2011, Bangalore, Dated : 23rd May, 2011**

The following Order made by the Governor is hereby published for general information:-

**"ORDER - I**

In exercise of the powers conferred upon me by clause (1) of Article 174 of the Constitution of India, I, H.R.Bhardwaj, Governor of Karnataka, do hereby summon the Karnataka Legislative Council to meet at Bangalore at 12.15 P.M. on Thursday the 2nd day of June, 2011.

**H.R. BHARDWAJ**
**GOVERNOR OF KARNATAKA"**

By order and in the name of the Governor of Karnataka,

**G.K. BOREGOWDA**
Secretary to Government
Department of Parliamentary Affairs and Legislation

## PARLIAMENTARY AFFAIRS AND LEGISLATION SECRETARIAT

### NOTIFICATION

**No. DPAL 05 SAMVYAVI 2011, Bangalore, Dated : 23rd May, 2011**

The following Order made by the Governor is hereby published for general information:-

**"ORDER - II**

In exercise of the powers conferred upon me by clause (1) of Article 174 of the Constitution of India, I, H.R.Bhardwaj, Governor of Karnataka, do hereby summon the Karnataka Legislative Assembly to meet at Bangalore at 12.15 P.M. on Thursday the 2nd day of June, 2011.

**H.R. BHARDWAJ**
**GOVERNOR OF KARNATAKA"**

By order and in the name of the Governor of Karnataka,

**G.K. BOREGOWDA**
Secretary to Government
Department of Parliamentary Affairs and Legislation

# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಸೋಮವಾರ, ಮೇ ೨೩, ೨೦೧೧ (ಜ್ಯೇಷ್ಠ ೨, ಶಕ ವರ್ಷ ೧೯೩೩) | ನಂ. ೫೨೮ |
|---|---|---|

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ವಿಧಿ 4ರ ಮೇರೆಗೆ ಅಧಿಸೂಚನೆ**

**ಸಂಖ್ಯೆ: ಸಿಐ 127 ಎಸ್‌ಪಿಕ್ಯೂ 2011, ಬೆಂಗಳೂರು, ದಿನಾಂಕ: 21.05.2011**

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966 (ಕರ್ನಾಟಕ ಕಾಯ್ದೆ 18/1966) ರ ಕಲ0 28 ರ ಉಪ ಕಲಂ (1)ರ ಕೆಳಗೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಐ 412 ಎಸ್‌ಪಿಕ್ಯೂ 2010, ದಿನಾಂಕ: 27–7–2010 ರಂದು ಕರ್ನಾಟಕ ರಾಜ್ಯಪತ್ರದ ಪುಟ ಸಂಖ್ಯೆ: 1 ರಿಂದ 43 ರ ವರೆಗಿನ ಭಾಗ–3 ರಲ್ಲಿ ದಿನಾಂಕ: 28–7–2010. ರಂದು ಪ್ರಕಟಗೊಂಡ ಈ ಕೆಳಗಿನ ಅನುಸೂಚಿಯಲ್ಲಿ ಕಾಣಿಸಿರುವ ಜಮೀನುಗಳು ಹಾಗೂ ಅವುಗಳ ಕ್ಷೇತ್ರವನ್ನು ಅಂಕಣ 4 ರಿಂದ 6 ರವರೆಗೆ ವಿವರಿಸಿದ ಪರಿಮಿತಿಯೊಂದಿಗೆ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966 ರ ಕಲಂ 4 ರನ್ವಯ ವಿಹಿತವಾಗಿರುವ ಅಧಿಕಾರದ ಮೇರೆಗೆ **ಕೈಗಾರಿಕಾ ಪ್ರದೇಶ** ದಿಂದ ಕೈಬಿಡಲಾಗಿದೆ ಅಂತಾ ಕರ್ನಾಟಕ ಸರ್ಕಾರವು ಈ ಮೂಲಕ ಘೋಷಿಸುತ್ತದೆ.

**ಜಿಲ್ಲೆ : ಬೆಳಗಾವಿ ತಾಲ್ಲೂಕು : ಸವದತ್ತಿ ಹೋಬಳಿ : ಯರಗಟ್ಟಿ ಗ್ರಾಮ : ಮದ್ಲೂರ**

| ಕ್ರ. ಸಂ. | ರಿ.ಸ. ನಂಬರ್ | ವಿಸ್ತೀರ್ಣ ಎ–ಗುಂ–ಆ | ಚಕ್ಕುಬಂದಿ (ಚತು:ಸೀಮೆ) 28(1)ರ ಅಧಿಸೂಚನೆ ಪ್ರಕಾರ | | | |
|---|---|---|---|---|---|---|
| | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| **1** | **2** | **3** | **4** | **5** | **6** | **7** |
| 1. | 110 ಪೈ | 0–12 | 110 ಪೈ | ರಸ್ತೆ | 106 | 111 |
| 2. | 111 ಪೈ | 0–13 | 111 ಪೈ | ರಸ್ತೆ | 110 | 111 ಪೈ |
| ಒಟ್ಟು | | **0–25** | | | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಹೆಚ್. ಶೇಷಗಿರಿ**
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಸೋಮವಾರ, ಮೇ ೨೩, ೨೦೧೧ (ಜ್ಯೇಷ್ಠ ೨, ಶಕ ವರ್ಷ ೧೯೩೩) | ನಂ. ೫೨೯ |
|---|---|---|

## PROCEEDINGS OF THE GOVERNMENT OF KARNATAKA

## MINORITY WELFARE SECRETARIAT

**Sub :** Appointment of Khazi Sri K.M.Mujeebuddin S/o Quazi Ghiyasuddin Shorapur, Yadgir District & Its surrounding villages- regarding.

**Read :** 1) Application dated: 29.10.2010 Khazi K.M.Mujeebuddin Shorapur Yadgir District.

2) Letter No.KSBW/ADM/CR-397/2010-11,dated: 31.12.2010 of the Chief Executive Officer, Karnataka State Board of Wakfs Bangalore.

**PREAMBLE:-**

Shri Quazi K.M. Mujeebuddin S/o Quazi Ghiyasuddin of Shorapur in his representation read at (1) above has stated that by virtue of heriditory succession of his fore-fathers he is rendering the Khazath of Shorapur after the demise of his father. He is the elder son to his parents and his other brothers have given their consent to his appointment.

A report was called for from the Karnataka State Board of Wakfs, Bangalore to ascertain the opinion of the Principal Mohammed and residents of the local area as per the provision of the Khazi Act, 1880. The Chief Executive Officer, Karnataka State Board of Wakfs, Bangalore in his letter read at (2) above while forwarding the recommendations of the Wakf Officer, District Wakf Advisory Committee, Yadgir has stated that Sri. K.M.Mujeebuddin S/o Quazi

Ghiyasuddin, is rendering the services of Khazi of Shorapur on heriditory charactership basis and has recommended to appoint him as Khazi of Yadgir District as per the provision of the Khazi Act, 1880. Hence, the following order:

**GOVERNMENT ORDER NO. MWD 354 WES 2010, BANGALORE, DATED: 23 -05-2011**

In exercise of the powers conferred under Section 2 of the Khazi Act, 1880, Government is pleased to appoint Sri K.M.Mujeebuddin, S/o Quazi Ghiyasuddin as Khazi of Shorapur, Yadgir District, and its 68 surrounding villages as in Annexure, with immediate effect and until further orders.

By order & in the name of the Governor of Karnataka.

**ABBAS SHARIEFF**
Under Secretary to Government
Minority Welfare Department

**LIST OF VILLAGES COMES UNDER THE JURISDICTION OF QUAZATH SHORAPUR**

| Sl. No. | Name | Sl. No. | Name | Sl. No. | Name |
|---|---|---|---|---|---|
| 1 | Shorapur | 24 | Devapur | 47 | Malgati |
| 2 | kabadgira | 25 | Ammapur | 48 | Kodekal |
| 3 | Kumhar Peth | 26 | Arachalli | 49 | Teerth |
| 4 | Devar Gonahalli | 27 | Devatkal | 50 | Mar Halli |
| 5 | Haldhall | 28 | Ammapur | 51 | Wadgira |
| 6 | Mach Gandal | 29 | Chigrahalli | 52 | Uppal Dhani |
| 7 | Nagrahal | 30 | Mangalore | 53 | Jogand Bhalki |
| 8 | Andrahal | 31 | Bachimahti | 54 | Kowatiguda |
| 9 | Gonhal | 32 | Jaali Benehi | 55 | Uppal Dhani |
| 10 | Devikera | 33 | Sangyahalli | 56 | Narayapur |
| 11 | Khanapur | 34 | Santpur | 57 | Hanam Sagar |
| 12 | Yentapur | 35 | Tintani | 58 | Jogand Bhalki |
| 13 | Malgari | 36 | Shelgi | 59 | Rayangole |
| 14 | Godhall | 37 | Shantpalli | 60 | Bhanpparaga |
| 15 | Yentapur | 38 | Hemar Wadgi | 61 | Karikal |
| 16 | Dand Sholapur | 39 | Advadgi | 62 | Bodihall |
| 17 | Tipnatgi | 40 | Narasamgam | 63 | Bhapperga |
| 18 | Badenihal | 41 | Bhiman palli | 64 | Shelgi |
| 19 | Godgira | 42 | Talwargira | 65 | Kowatigoda |
| 20 | Rukmapur | 43 | Warengira | 66 | Holekere |
| 21 | Timmapur | 44 | Godgera | 67 | Atapur |
| 22 | Rangampeth | 45 | Nagnoor | 68 | Maral Bhalki |
| 23 | Hassanapur | 46 | Khanapur | | |

**ABBAS SHARIEFF**
Under Secretary to Govt.
Minority Welfare Department